ಉಪನ್ಯಾಸ ಗ್ರಂಥಮಾಲೆ
೩೭೯

# ಜಾನಪದ ಹಾಡುಗಳಲ್ಲಿ ನರಗುಂದ ಬಾಬಾಸಾಹೇಬ

ಡಾ. ಸೋಮಶೇಖರ ಇಮ್ರಾಪೂರ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ನವ್ಹೆಂಬರ, ೧೯೮೭

ಉಪನ್ಯಾಸ ಗ್ರಂಥಮಾಲೆ

೩೭೯

# ಜಾನಪದ ಹಾಡುಗಳಲ್ಲಿ ನರಗುಂದ ಬಾಬಾಸಾಹೇಬ

ಡಾ. ಸೋಮಶೇಖರ ಇಮ್ರಾಪೂರ
ಎಂ.ಎ., ಪಿಎಚ್.ಡಿ.





ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ನವ್ಹಂಬರ, ೧೯೮೬

ಪ್ರಕಾಶಕರು :

**ಎಸ್. ಬಿ. ನಾಯಕ**
ನಿರ್ದೇಶಕರು
ಪ್ರಸಾರಾಂಗ
**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ**

ಪ್ರಥಮ ಮುದ್ರಣ : ೫೦೦೦ ಪ್ರತಿಗಳು
ನವ್ಹೆಂಬರ, ೧೯೮೬



ಬೆಲೆ : ೫೦ ಪೈಸೆ

ಮುದ್ರಕರು :

**ಹೊಂಬಾಳಿ ಪ್ರಿಂಟರಿ**
ಕೋಯಿನ್‌ರೋಡ, ಹುಬ್ಬಳ್ಳಿ-೨೦.

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ 'ಈ ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು. ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಪ್ರಯತ್ನಕ್ಕೆ ನಮ್ಮ ನೀರಿಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವುದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೭೮ ಪುಸ್ತಿಕೆಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಎಸ್. ಜಿ. ದೇಸಾಯಿ
ಕುಲಪತಿಗಳು

# ಅರಿಕೆ ಮತ್ತು ಕೃತಜ್ಞತೆ

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣಾ ಯೋಜನೆಯ ಅಂಗವಾಗಿ ನರಗುಂದದಲ್ಲಿ ನಡೆದ ೩೫೧ನೆಯ ಉಪನ್ಯಾಸ ಶಿಬಿರದಲ್ಲಿ ಭಾಗವಹಿಸಿ ದಿ. ೨೬-೮-೧೯೮೫ ರಂದು ಮಾಡಿದ ಉಪನ್ಯಾಸದ ವಿಷಯವೇ ಈ ಕಿರುಪುಸ್ತಿಕೆ "ಜಾನಪದ ಹಾಡುಗಳಲ್ಲಿ ನರಗುಂದ ಬಾಬಾಸಾಹೇಬ".

ನರಗುಂದದ ಬಂಡಾಯಕ್ಕೆ ಸಂಬಂಧಿಸಿದ ಇತಿಹಾಸ ಹಾಗೂ ಜಾನಪದದಲ್ಲಿ ಬಾಬಾಸಾಹೇಬನ ಬಗೆಗೆ ವ್ಯಕ್ತವಾಗಿರುವ ವಿಷಯುಗಳಲ್ಲಿ ಬಹುಮಟ್ಟಿನ ಸಾಮ್ಯತೆ ಇರುವುದನ್ನು ಕಾಣುತ್ತೇವೆ. ಜಾನಪದದಲ್ಲಿ ಬಾಬಾಸಾಹೇಬ ಮತ್ತು ನರಗುಂದ ಬಂಡಾಯ ಹಾಗೂ ಪತನಕ್ಕೆ ಕುರಿತಾಗಿ ಅದೆಷ್ಟೋ ಗಾದೆಮಾತುಗಳು, ಒಗಟುಗಳು, ಕಥೆ-ಐತಿಹ್ಯಗಳು, ನಂಬಿಕೆ-ಮೂಢನಂಬಿಕೆಗಳು ಇತ್ಯಾದಿಯಾಗಿ ಹಲವಂದದಲ್ಲಿ ಜನಸಾಮಾನ್ಯರಲ್ಲಿ ಪ್ರಚಲಿತವಿರಬಹುದು. ಆದರೆ ಪ್ರಸ್ತುತ ಕಿರುಗ್ರಂಥದಲ್ಲಿ ಲಭ್ಯವಾದ ಜನಪದ ಹಾಡುಗಳನ್ನು ಮಾತ್ರ ಗಮನಿಸಿ 'ಬಾಬಾಸಾಹೇಬ'ನನ್ನು ಕುರಿತು ಪ್ರಸ್ತಾಪಿಸಲಾಗಿದೆ.

ಪ್ರಸಾರಾಂಗದ ಉಪನ್ಯಾಸ ಶಿಬಿರವನ್ನು ತಮ್ಮ ಶ್ರೀ ಚೆನ್ನಬಸವೇಶ್ವರ ವಿರಕ್ತಮಠದಲ್ಲಿ ನಡೆಯುವಂತೆ ಯೋಜಿಸಿ, ನಮ್ಮೆಲ್ಲರನ್ನೂ ಆತ್ಮೀಯತೆಯಿಂದ ಕಂಡು ಆಶೀರ್ವದಿಸಿದ

ಪೂಜ್ಯ ಶ್ರೀ ಮ. ನಿ. ಪ್ರ. ಸ್ವ. ಮಲ್ಲಿಕಾರ್ಜುನ ಮಹಾಸ್ವಾಮಿಗಳಿಗೆ ನನ್ನ ನಮಸ್ಕಾರಗಳು.

ಪ್ರಸ್ತುತ ಉಪನ್ಯಾಸ ಶಿಬಿರದಲ್ಲಿ ಭಾಗವಹಿಸಲು ಅವಕಾಶ ಮಾಡಿಕೊಟ್ಟ ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕ ಅವರಿಗೂ, ಸಹಾಯಕನಿರ್ದೇಶಕರಾದ ಶ್ರೀ ಎಲ್. ಎಮ್. ಗುಡ್ಡೀನ ಅವರಿಗೂ ನಾನು ಋಣಿಯಾಗಿದ್ದೇನೆ. ಈ ಪುಸ್ತಿಕೆ ಬರೆಯಲು ನೆರವಾದ ಗ್ರಂಥಗಳ ಲೇಖಕರಿಗೂ ನಾನು ಕೃತಜ್ಞ.

ಧಾರವಾಡ — **ಸೋಮಶೇಖರ ಇಮ್ರಾಪೂರ**

**31-8-85**

# ಪರಿವಿಡಿ


ಮುನ್ನುಡಿ iii

ಅರಿಕೆ ಮತ್ತು ಕೃತಜ್ಞತೆ v

೧. ಪೀಠಿಕೆ ೧

೨. ಜಾನಪದ ನರಗುಂದ ಮತ್ತು ಬಾಬಾಸಾಹೇಬ ೬

೩. ಕ್ರಾಂತಿವೀರ ದೊರೆ ಬಾಬಾಸಾಹೇಬ ೧೧

೪. ಬಾಬಾಸಾಹೇಬ ಮತ್ತು ಜನಪದ ಭಾವಸಂಪತ್ತು ೨೩

೫. ಉಪಸಂಹಾರ ೩೮

೬. ಗ್ರಂಥಋಣ ೪೦

## ೧. ಪೀಠಿಕೆ

ಭಾರತೀಯ ಸ್ವಾತಂತ್ರ್ಯಸಂಗ್ರಾಮದ ಇತಿಹಾಸವೇ ರಮ್ಯೋಜ್ವಲವಾದುದು. ಆಂಗ್ಲರನ್ನು ಭಾರತದಿಂದ ತೊಲಗಿಸುವಲ್ಲಿ ತಮ್ಮ ತನುಮನಧನದಿಂದ ಪ್ರಾಣಾಹುತಿಗೈದ ವೀರರು ಇತಿಹಾಸದುದ್ದಕ್ಕೂ ಚುಕ್ಕಿಯಾಗಿ ಕಂಗೊಳಿಸುತ್ತಿದ್ದಾರೆ. ಇಡೀ ದೇಶಕ್ಕೆ ದೇಶವೇ ಕೆಂಡದುಂಡೆಯಾಗಿ ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಿದ್ದ ಕಾಲದಲ್ಲಿ—ಕರ್ನಾಟಕದ ಅದೆಷ್ಟೋ ಪಾಳೆಯಗಾರರು, ಸಂಸ್ಥಾನಿಕರು, ಅರಸರು ಬಿಳಿಯರಿಗೆ ಸಿಂಹಸ್ವಪ್ನವಾಗಿ ನಿಂತದ್ದನ್ನು ಮರೆಯುವಂತಿಲ್ಲ. ಸ್ವಾತಂತ್ರ್ಯ ಕಹಳೆಯನ್ನು ಮೊಳಗಿಸಿ ಅಪಾರ ದೇಶಪ್ರೇಮ ಹಾಗೂ ಸಾಹಸಕ್ಕೆ ಪ್ರತೀಕವಾದ ಬಿದನೂರು, ಕೊಪ್ಪಳ, ಬಾದಾಮಿ, ಹಲಗಲಿ. ಸುರಪುರ, ಮುಂಡರಗಿ ಹಾಗೂ ಕಿತ್ತೂರು ಸಂಸ್ಥಾನಗಳಂತೆಯೇ, ತನ್ನದೇ ಆದ ವೀರಪರಂಪರೆಯನ್ನು ಮೊಳಗಿಸಿದ ನರಗುಂದ ಬಂಡಾಯಗಾರರು ಮತ್ತು ಆ ಬಂಡಾಯಕ್ಕೆ ಕೇಂದ್ರ ವ್ಯಕ್ತಿಯಾದ ಬಾಬಾಸಾಹೇಬ ಇಂದಿಗೂ ಇತಿಹಾಸದ ಭಾಗವಾಗಿದ್ದಾರೆ, ಜಾನಪದರ ಮನದಾಳದಲ್ಲಿ ಅಜ್ರೋತಿ ನಿಂತಿದ್ದಾರೆ.

ಬಾಬಾಸಾಹೇಬನ ಮೂಲ ಹೆಸರು ಭಾಸ್ಕರರಾವ್ ಅಪ್ಪಾಸಾಹೇಬ. ಬಾಬಾಸಾಹೇಬನೆಂಬುದು ಪ್ರಜೆಗಳು ಪ್ರೀತಿ-ಆದರ-ಗೌರವದಿಂದ ಕರೆದ ಹೆಸರಾಗಿರಬೇಕು. ಸ್ವರ್ಗದ್ವೈಸಿರಿಗೆ ಹೆಸರಾದ ನರಗುಂದದ ಜನಾನುರಾಗಿ ಹಾಗೂ ದೊರೆಯಾಗಿ ಮೆರೆದ ಬಾಬಾಸಾಹೇಬನ ದೇಶಪ್ರೇಮ, ಸಾಹಸ ಇತ್ಯಾದಿಗಳನ್ನು ಜಾನಪದರು ಬಾಯ್ತುಂಬಾ ಕೊಂಡಾಡಿದ್ದಾರೆ. ಬಿಳಿಯರನ್ನು ಸದೆ ಬಡಿಯಲು ವೀರಕಂಕಣ ತೊಟ್ಟು ಬಂಡಾಯ ಹೂಡಿದ ವಾಸ್ತವಿಕ ಸಂಗತಿಗಳನ್ನು, ಇತಿಹಾಸದ ದಾಖಲೆಗಳನ್ನು ಹಾಡುಗಳಲ್ಲಿ ಮೂರ್ತಿಮತ್ತಾಗಿಸಿದ್ದಾರೆ.

ಶಾಸನೋಕ್ತವಾದ-ನರಗುಂದದ ಸಮೃದ್ಧ ಸಂಪತ್ತು, ಅಮೋಘವಾಗಿ ವರ್ಣಿತವಾಗಿದೆ. ಪುರಾತನ ಕಾಲದ ಪ್ರಾಗೈತಿಹಾಸಿಕ ದಾಖಲೆಗಳನ್ನು ಹೊಂದಿದ ನರಗುಂದವು ಶಿಲಾಯುಗ, ತಾಮ್ರಯುಗದ ಕಾಲದಿಂದಲೂ ಸುವಿಖ್ಯಾತಿ ಪಡೆದಿತ್ತು. ಕರ್ನಾಟಕದ ಅರಸು ಮನೆತನಗಳಾದ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಸೇವುಣರು, ವಿಜಯನಗರದ ಅರಸರಿಗೆ ಮಹತ್ವದ ಮತ್ತು ಫಲಪ್ರದವಾದ ಪ್ರದೇಶವೆನಿಸಿದ್ದ ನರಗುಂದವು, ಪುರಾತನಕಾಲದಿಂದಲೂ ಸಾಂಸ್ಕೃತಿಕ-ನೆಲೆ-ಬೆಲೆಗಳನ್ನು ಹೊಂದಿ ನಿಂತ ಸಂಗತಿ ಐತಿಹಾಸಿಕ ಸತ್ಯವಾಗಿದೆ. ಆದರೆ ನರಗುಂದದ ಜನಪದ ಕಾವ್ಯ ಸಾಹಿತ್ಯವು ಆ ನಗರದ ಪ್ರಾಗೈತಿಹಾಸಿಕ ಮತ್ತು ಪ್ರಾಚೀನ ಇತಿಹಾಸದ ಬಗೆಗೆ ಏನನ್ನೂ ತಿಳಿಸುವುದಿಲ್ಲ. ಆಧುನಿಕ ಇತಿಹಾಸದ ಅದರಲ್ಲೂ ನರಗುಂದ ಬಂಡಾಯದ ಕಾಲದ ಇತ್ತೀಚಿನ ವಿವರಗಳಿಗೆ ಮಾತ್ರ ಅವುಗಳ ವಸ್ತು ಸೀಮಿತವಾಗಿರುವುದನ್ನು ಕಾಣುತ್ತೇವೆ.

ಜಾನಪದ ಬದುಕಿನ ಅವಿಭಾಜ್ಯ ಅಂಗವೆನಿಸುವ ಇತಿಹಾಸ ಹಾಗೂ ಐತಿಹಾಸಿಕವೆನ್ನಬಹುದಾದ ಅದೆಷ್ಟೋ ಘಟನೆಗಳು-ಜಾನಪದ ಸಂಸ್ಕೃತಿಯ ಭಾಗವಾಗಿಯೇ ತಲೆತಲಾಂತರದಿಂದ ಮುಂದುವರೆಯುವುದು ಮತ್ತು ಅವೇ ಹಾಡು, ಕಥೆ, ಕಾವ್ಯ, ಗಾದೆ, ಒಗಟು, ಐತಿಹ್ಯಗಳಾಗಿ ಹೊರಹೊಮ್ಮಿ ಘಟನೆಗಳ ಜೀವಂತಿಕೆಗೆ ಸಾಕ್ಷಿಯಾಗುತ್ತ-ಸಮಷ್ಟಿಯ ಅನುಭವವನ್ನೂ ಪ್ರತಿನಿಧಿಸುತ್ತಾ ಹೋಗುವುದು ಜಾನಪದದ ವಿಶಿಷ್ಟ ಲಕ್ಷಣವಾಗಿದೆ. ಹೀಗೆಂದಾಕ್ಷಣಕ್ಕೆ ಐತಿಹಾಸಿಕ ಘಟನೆಯ ಸುತ್ತ ಕಾಲ್ಪನಿಕ–ವಾಸ್ತವಿಕ ವಿವರಗಳನ್ನೇ ತುಂಬಿಕೊಂಡ ಹಾಡು ಕಥೆಗಳೂ ಜನಪದ ಸಾಹಿತ್ಯದಲ್ಲಿ ಇಲ್ಲವೆಂತಲ್ಲ. ಆದರೆ ಆ ಪ್ರಮಾಣ ಬಹುತೇಕ ಕಡಿಮೆ. ಇದಕ್ಕೆ ಪ್ರತಿಯಾಗಿ ಇತಿಹಾಸಕಾರರು ಗಮನಿಸದ ಅದೆಷ್ಟೋ ಸೂಕ್ಷ್ಮಾಂಶಗಳನ್ನು ಹೊಂದಿದ ಜನಪದ ಸಾಹಿತ್ಯ—ಇತಿಹಾಸಕ್ಕೆ ಬಲವಾದ ಆಕರಗಳನ್ನು ಒದಗಿಸುವ ಸಾಮರ್ಥ್ಯ ಪಡೆದಿರುವುದುಂಟು. ಈ ಅಭಿಪ್ರಾಯದ ಹಿನ್ನೆಲೆಯಲ್ಲಿ ನರಗುಂದದ ಬಾಬಾಸಾಹೇಬನನ್ನು ಕುರಿತ ಜನಪದ ಹಾಡುಗಳು—ಬಹುಮಟ್ಟಿಗೆ ಇತಿಹಾಸದ ಸತ್ಯಸಂಗತಿಗಳನ್ನೇ ಪ್ರತಿನಿಧಿಸಿಕೊಂಡದ್ದು ಮಹತ್ವದ ಸಂಗತಿಯಾಗಿದೆ. ಅಷ್ಟೇ ಅಲ್ಲ, ಇತಿಹಾಸದಲ್ಲಿ ಕಾಣಸಿಗದ ಹಲವಾರು ಮಹತ್ವದ ಸೂಕ್ಷ್ಮ ವಿವರಗಳನ್ನು ಒಳಗೊಂಡ ಅವು—ಆ ಸಂಬಂಧದ ಮಹತ್ವದ ದಾಖಲೆಗಳೂ ಆಗಿವೆ.

ಫಲವತ್ತಾದ ಭೂಮಿ ಹಾಗೂ ಚಿತ್ರಕಲೆ, ಶಿಲ್ಪಕಲೆ, ಸಾಹಿತ್ಯ ಸಂಗೀತಕ್ಕೆ, ವಿದ್ವತ್ತು ಪಾಂಡಿತ್ಯಕ್ಕೆ ನೆಲೆವನೆಯಾಗಿದ್ದ ಪ್ರಾಚೀನ ನರಗುಂದವು—೧೭ ನೇ ಶತಮಾನದಿಂದ ಇತ್ತೀಚೆಗೆ

ಛತ್ರಪತಿ ಶಿವಾಜಿ, ೧೮ ನೇ ಶತಮಾನದಲ್ಲಿ ಹೈದರಅಲಿ, ನಂತರ ಆತನ ಮಗ ಟೀಪುಸುಲ್ತಾನನ ಒಡೆತನಕ್ಕೆ ಸೇರಿದ್ದಾಗಿತ್ತು. ಆಮೇಲೆ ೧೯ ನೇ ಶತಮಾನದ ಪ್ರಾರಂಭದಲ್ಲಿ ದಾದಾಜಿ ಅಪ್ಪ ಎನ್ನುವವರಿಗೆ ವಹಿಸಲ್ಪಟ್ಟಿತು. ಕ್ರಿ. ಶ. ೧೮೪೨ರಲ್ಲಿ ಭಾಸ್ಕರರಾವ್ ಅಪ್ಪಾಸಾಹೇಬರಿಗೆ ಕೊಡಲ್ಪಟ್ಟಿತು. ಆಗಲೇ ಅದು ಬ್ರಿಟೀಷರ ಆಳಿಕೆಗೆ ಒಳಪಟ್ಟಿದ್ದ ಸಂಗತಿ ಇತಿಹಾಸದಲ್ಲಿ ಉಕ್ತವಾಗಿದೆ. ಅದಲ್ಲದೆ ಬೆಳ್ವೊಲ ೩೦೦ ರ ಸುವಿಖ್ಯಾತ ಅಗ್ರಹಾರವಾಗಿದ್ದ ನರಗುಂದದ ಸಾಂಸ್ಕೃತಿಕ ಇತಿಹಾಸಕ್ಕೆ ಅಲ್ಲಿಯ ಶಾಸನಗಳೇ ಸಾಕ್ಷಿಯಾಗಿವೆ. ಅಲ್ಲಿಯ ಸುಪ್ರಸಿದ್ಧ ದೇವಾಲಯಗಳು, ತಟಾಕಗಳು, ಚಿತ್ರಕಲೆಗಳು ಇಂದಿಗೂ ನರಗುಂದದ ವೈಭವೋಪೇತ ಬದುಕಿನ ಅವಶೇಷಗಳಾಗಿ ನಿಂತಿವೆ. ನರಗುಂದದ ಐತಿಹಾಸಿಕ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಮೃದ್ಧಿ ಪಡೆದ ಭೂಮಿಯನ್ನೇ ತನ್ನ ಆಡುಂಬೋಲವನ್ನಾಗಿ ಮಾಡಿಕೊಂಡ ಬಾಬಾಸಾಹೇಬನಂಥ ಸ್ವಾತಂತ್ರ್ಯಪ್ರೇಮಿ ವೀರರು ಜನಪದರ ಅಂತರಂಗದಲ್ಲಿ ಬತ್ತದ ಝರಿಯಾಗಿ ನಿಂತಿದ್ದಾರೆ. ನರಗುಂದದ ಅರಸರ ಕಾಲದ ವೈಭವದ ಸಮಸ್ತ ವಿವರಗಳನ್ನೂ ಒಳಗೊಂಡಂತೆ ಬಾಬಾಸಾಹೇಬನ ಕೌಟುಂಬಿಕ ಸಂಗತಿ, ಆತನ ಘನವ್ಯಕ್ತಿತ್ವ, ರಾಜಕೀಯ ಮುತ್ಸದ್ಧಿತನ, ಸಾಹಸ ಹಾಗೂ ಪ್ರಯತ್ನಶೀಲ ಮನೋವೃತ್ತಿ, ಸೂಕ್ಷ್ಮಗ್ರಾಹಿತ್ವ, ಪ್ರಸಂಗಾವಧಾನ ಚತುರತೆ ಇತ್ಯಾದಿಗಳೊಂದಿಗೆ -- ಆಗಿ ಹೋದ ಬಂಡಾಯದ ಕಾವನ್ನು ಜಾನಪದರು ತಮ್ಮ ಹಾಡುಗಳಲ್ಲಿ ಜೀವಂತವಾಗಿಟ್ಟಿದ್ದಾರೆ. ವಾಸ್ತವವಾಗಿ ನರಗುಂದವೆಂದರೆ ನರಿಗಳು ವಾಸಿಸುವ ಗುಡ್ಡವೆಂದು ಸಾಮಾನ್ಯ ಅರ್ಥ. ಆದರೆ ವಿದ್ವಾಂ

ಸರೊಬ್ಬರ ದೂರಾನ್ವಯದ ಅಭಿಪ್ರಾಯದಲ್ಲಿ ನರಗುಂದ ವೆಂದರೆ ಸುಗಂಧಯುಕ್ತ ಹುಲ್ಲನ್ನು ಬೆಳೆಯುವ ಪವಿತ್ರವಾದ ಪ್ರದೇಶವಂತೆ*. ಕೇಳುವುದೇನು ? ಅಂಥ ನೆಲಜಲದ ಪರಿಮಳ ಸೂಸುವ ನರಗುಂದದ ಜನಪದ ಹಾಡುಗಳು ಬಾಬಾಸಾಹೇಬ ಮತ್ತು ನರಗುಂದದ ದುರಂತವನ್ನು ವಿಚಿತ್ರಪೂರ್ಣವಾಗಿ ಅಭಿವ್ಯಕ್ತಗೊಳಿಸಿವೆ.

ನರಗುಂದ–ಪತನಕ್ಕೆ ಕಾರಣವಾದ ದತ್ತಕ ಪ್ರಕರಣವೇ. ಈ ಮೊದಲು ಕಿತ್ತೂರು ಸಂಸ್ಥಾನದ ಪತನಕ್ಕೂ ಕಾರಣವಾದುದನ್ನು ಅವಲೋಕಿಸಿದರೆ–ಈ ಎರಡೂ ಬೇರೆ ಬೇರೆ ಸಂದರ್ಭದ ದುರಂತಗಳಲ್ಲಿ ಹುಟ್ಟಿದ ಜನಪದ ಹಾಡುಗಳ ಮೂಲ ಸ್ವರೂಪ ಮತ್ತು ಆಶಯಗಳು ಒಂದೇ ಆಗಿ ಗೋಚರಿಸುವುದು ವಿಚಾರಾರ್ಹ ಸಂಗತಿಯಾಗಿದೆ. ಅದಲ್ಲದೇ ವೀರ. ಕರುಣ. ಭೀಭತ್ಸರಸೋಪೇತ ಹಾಡುಗಳಿಗೆ ಪ್ರೇರಣೆಯಾದ ಮೂಲವಸ್ತುವೂ ಒಂದೇ ಆಗಿದೆ. ಕಾರಣ ಇದು ಜಾನಪದ ಮೂಲಭೂತ ಮನಸ್ಸು ಮತ್ತು ಸಮಾನ ಆಲೋಚನೆಯ ಫಲವೆನ್ನಬಹುದು. ಹಾಗಿದ್ದರೂ ಕೂಡಾ ಮೂಲ ಘಟನೆಗಳು ಬದಲಾದಂತೆ ಕಾವ್ಯಸೃಷ್ಟಿಕ್ರಿಯೆಯಲ್ಲಿಯೂ ಬದಲಾವಣೆಯಾಗುವುದು ಸ್ವಾಭಾವಿಕ. ಅಂತೆಯೇ ಕಿತ್ತೂರಿನ ಐತಿಹಾಸಿಕ ಜನಪದ ಹಾಡುಗಳ ವೈಖರಿಯೇ ಬೇರೆ. ನರಗುಂದದ ಹಾಡುಗಳ ವೈಖರಿಗಳೇ ಬೇರೆಬೇರೆಯಾಗಿ ನಿಲ್ಲುತ್ತವೆ. ಆದರೆ ಒಂದು ಮಾತು ನಿಜ. ಕಿತ್ತೂರಿನ ಐತಿಹಾಸಿಕ ಜನಪದ ಹಾಡುಗಳ ಔನ್ನತ್ಯ ಮತ್ತು ಔಚಿತ್ಯಕ್ಕೆ ಕಾರಣವೆನಿಸುವ ಆಯಾ ಭಾಷೆಯ ಧ್ವನಿ, ಗತ್ತು ಗಮ್ಮತ್ತುಗಳ ವಿನ್ಯಾಸ, ಭಾವ-

ಸಂಪತ್ತು, ವೈವಿಧ್ಯಮಯತೆ, ಸನ್ನಿವೇಶ ಚಿತ್ರಣದ ಜೀವಂತಿಕೆ, ಭಾಷೆಯ ಬೆಡಗು ಮುಂತಾದವುಗಳ ಮಟ್ಟಕ್ಕೆ, ನರಗುಂದದ ಐತಿಹಾಸಿಕ ಹಾಡುಗಳನ್ನು ವರೆಹಚ್ಚಲು ಆಗುವುದಿಲ್ಲ. ಆ ಹಂತಕ್ಕೆ ಇವು ಮುಟ್ಟುವುದಿಲ್ಲವೆಂದೇ ಹೇಳಬಹುದು.

# ೨. ಜಾನಪದ ನರಗುಂದ ಮತ್ತು ಬಾಬಾಸಾಹೇಬ

ಸುಸಂಸ್ಕೃತ ನಾಗರಿಕತೆಯನ್ನೂ, ಪ್ರಾಗೈತಿಹಾಸಿಕ ಮಹತ್ವವನ್ನೂ ಹೊಂದಿದ ನರಗುಂದವು ಜಾನಪದರ ಸಹಜಸಿದ್ಧ ಕಾವ್ಯಸೃಷ್ಟಿಗೆ ಪ್ರೇರಣೆಯಾಗಿರುವುದು ಸಹಜವಾಗಿದೆ. ನರಗುಂದದ ಆಧುನಿಕ ಇತಿಹಾಸವೇ ಹೆಚ್ಚಾಗಿ ನರಗುಂದದ ಜನಸಾಮಾನ್ಯರನ್ನು ಆಕರ್ಷಿಸಿರುವುದರಿಂದ, ನರಗುಂದ ಪತನವನ್ನು ಕಣ್ಣಾರೆ ಕಂಡು ಪರಿತಪಿಸಿ ಮಮ್ಮಲ ಮರುಗಿ ತಮ್ಮದೆನ್ನುವುದೆಲ್ಲವನ್ನೂ ಹುಡಿಗೂಡಿಸಿಕೊಂಡದ್ದರಿಂದ, ಆ ಇತಿಹಾಸದ ಕಥೆಯೇ ವ್ಯಥೆಯಾಗಿ ಹಲವು ಹತ್ತಾರು ಬಗೆಯ ವೈವಿಧ್ಯಪೂರ್ಣ ಜನಪದ ಹಾಡುಗಳಿಗೆ ಜನ್ಮಕೊಟ್ಟಿದೆ. ನರಗುಂದ ಬಂಡಾಯ, ಹಾಗೂ ಭೀಕರ ದುರಂತವನ್ನು ಚಿತ್ರಿಸುವುದೇ ಎಲ್ಲ ಹಾಡುಗಳ ಪ್ರಮುಖ ಆಶಯವಾಗಿದೆ. ನರಗುಂದದ ಜನಪದ ಹಾಡು ಸಂಚಯದ ಜೀವಂತಿಕೆ

ಇರುವುದೇ ಇಂಥ ಐತಿಹಾಸಿಕ ಹಾಡುಗಳಿಂದ ಎಂಬ ಮಾತನ್ನು ಮರೆಯುವಂತಿಲ್ಲ.

ಲಾವಣಿ, ಗೀಗೀ, ಹಂತೀಪದ, ಕೋಲುಪದ, ಕರ್ಬಲಾ, ಬೀಸುಕಲ್ಲುಪದ ಇತ್ಯಾದಿ ಪ್ರಕಾರಗಳಲ್ಲಿ ಅಭಿವ್ಯಕ್ತವಾಗಿರುವ ಎಲ್ಲ ಹಾಡುಗಳ ಮೂಲ ಸ್ಥಾಯಿ ಒಂದೇ ಆಗಿದೆ. ಅವುಗಳಲ್ಲೆಲ್ಲಾ ಮಿಡಿದ ಮನದಾಳದ ಕ್ರೋಧ, ಸಿಟ್ಟು, ಅನುಕಂಪ, ಅನುತಾಪಗಳ ಸ್ವನವೂ ಒಂದೇ. ಒಟ್ಟಂದದಲ್ಲಿ ಜಾನಪದದ ಹಲವಾರು ಛಂದಸ್ಸುಗಳಲ್ಲಿ ಚೆಲ್ಲುವರಿದ ಈ ಹಾಡುಗಳಲ್ಲಿ ಕೆಲವೊಂದು ಸುಸಂಸ್ಕೃತ ಮನಸ್ಸಿನ ಮುಕ್ತ ರಚನೆಗಳೆಂಬ ಭಾವ ಹುಟ್ಟಿಸಿದರೂ, ಜಾನಪದರ ನೈಜಭಾವ ಹಾಗೂ ಆಲಂಕಾರಿಕ ಆಡುಭಾಷೆಯ ಒಗರಿನಿಂದ ಸಮಷ್ಟಿಯ ಮನಸ್ಸನ್ನು ಮುಟ್ಟುವಲ್ಲಿ ಸಫಲವಾಗಿರುವುದು ಮಹತ್ವದ್ದಾಗಿದೆ.

"ಜಾತಮುತ್ತಿಗೆ ಬೆಲೆಯಿಲ್ಲ"—ಎಂದು ಬಾಬಾಸಾಹೇಬನನ್ನೇ ರೂಪಕವಾಗಿ ರೂಪಿಸಿಕೊಂಡ ಜನ, ಆತನ ಮುತ್ತಿನಂಥ ವ್ಯಕ್ತಿತ್ವಕ್ಕೆ ಮಾರು ಹೋಗಿದ್ದಾರೆ. ನಿಷ್ಠೆ, ಭಕ್ತಿ, ಗೌರವಾದರಗಳಿಂದ ಬಾಬಾಸಾಹೇಬನ ದೇಶಭಕ್ತಿಯ ಪರಾಕಾಷ್ಠೆಯನ್ನು ತಮ್ಮ ಹಾಡುಗಳಲ್ಲಿ ಗಟ್ಟಿಗೊಳಿಸಿದ್ದಾರೆ. ಸರ್ವಸಮರ್ಪಣ ಭಾವದಿಂದ ತಮ್ಮ ನರಗುಂದ ಬಂಡಾಯದ ವೀರನಾಯಕ ದೊರೆಯನ್ನು ಅನನ್ಯ ಭಾವದಿಂದ ಸ್ಮರಿಸಿದ್ದಾರೆ, ಹೊಗಳಿದ್ದಾರೆ. "ತುಪ್ಪ ಕಾಸೊತ್ತಿಗೆ ಗಪ್ಪಾತ ನರಗುಂದ; ಹಾಲ ಕಾಸೊತ್ತಿಗೆ ಹಾಳಾತ ನರಗುಂದ"—ಎಂದು ಮರುಗಿದ್ದಾರೆ. ಬಿಳಿಯರ ಬಾಯೆಂಜಲಕ್ಕೆ ಒಳಗಾಗಿ ಮದ್ದಿಗೆ ಸೆಗಣಿ ಕೂಡಿಸಿದ ಹಿತ

ಶತ್ರುಗಳನ್ನು ಶಪಿಸಿದ್ದಾರೆ. ಅನ್ಯಾಯವಾಗಿ ನರಗುಂದ ಸಂಸ್ಥಾನವನ್ನು ನುಂಗಿ, ನರಗುಂದದ ಸಂಪತ್ತನ್ನೇ ಸುಲಿಗೆ ಮಾಡಿದ ಬಿಳಿಯರನ್ನು ಹಂಗಿಸಿದ್ದಾರೆ. ಹಲ್ಲುಕಡಿದು ಬಾಯ್ತುಂಬಾ ಬೈಯ್ದಿದ್ದಾರೆ.

ನರಗುಂದ ಸಂಸ್ಥಾನ ಹಾಗೂ ಬಾಬಾಸಾಹೇಬನ ಕುಟುಂಬಕ್ಕೆ ಒದಗಿದ ದುರಂತವನ್ನು ಕಂಡು ಮನಸಾರೆ ದುಃಖಿಸಿದ ಜನಸಾಮಾನ್ಯರ ಪಾಡೇ ಹಾಡಾಗಿ ಹರಿದಿರುವುದು ಗಮನಾರ್ಹವಾಗಿದೆ. ನರಗುಂದ ಬಾಬಾಸಾಹೇಬನ ಜೀವಿತದ ಮೂಲ ಧ್ಯೇಯವನ್ನೇ ಜನಪದರು ಹಾಡುಗಳುದ್ದಕ್ಕೂ ಮೆಚ್ಚಿ ಕೊಂಡಾಡಿದ್ದಾರೆ.

"ಹೆರವರ ಆಳಾಗಿ ಬಾಳೋದಕ್ಕಿಂತ
ಮರಣವೇ ಲೇಸು"

ಎಂದು ಉಗ್ಗಡಿಸಿದ ಬಾಬಾಸಾಹೇಬನಂಥ "ನರವೀರರು ಭಾರತ ರಾಷ್ಟ್ರದೊಳಗ ತಿರುತಿರುಗಿ ಹುಟ್ಟಿ ಬರಲಿ ! ಬಂದು ಮೆರಸಲಿ ಮರ್ತ್ಯದೊಳಗ ನಾಡಿನಾ ಹೆಸರಾ"--ಎಂಬುದು ಜಾನಪದರ ತೀರದಾಸೆ. ಅಷ್ಟೇ ಅಲ್ಲ; ಹಾಡಿನ ಕೊನೆಯಲ್ಲಿ "ಕವಿ ಹೆಸರು ಯಾತಕ್ಕೆ ಬೇಕು ವೀರರ ಹೆಸರಿನ ಹಾಡ ಸಾಕು"—

"ವೀರರ ಕಥೆ ಕೇಳಿ ಜನ ಶೂರರಾಗಿ ಬಾಳಿದರ
ಕವಿಗಾರಗದಃ ಒಂದು ಉಪಕಾರಾ"

ಎನ್ನುವ ಅಭಿಪ್ರಾಯದಲ್ಲಿ-ಯಾವ ಒಣ ಪ್ರಚಾರದ ಸೋಂಕೂ ಇಲ್ಲದ ನಿಸ್ಪೃಹ ಮನಸ್ಸಿನ ತ್ಯಾಗ ಬುದ್ಧಿಯ ಸಂಸ್ಕಾರಯುಕ್ತ ಉದಾತ್ತ ಮನೋಭಾವವೂ, ಅತುಲ ದೇಶಪ್ರೇಮವೂ ಏಕ ಕಾಲಕ್ಕೆ ವ್ಯಕ್ತವಾಗಿರುವುದನ್ನು ಕಾಣುತ್ತೇವೆ.

ನರಗುಂದದ ಪತನ ಹಾಗೂ ಬಾಬಾಸಾಹೇಬನಿಗೆ ಸಂಬಂಧಿಸಿದ ನರಗುಂದದ ಜನಪದ ಹಾಡುಗಳ ಮೂಲ ಕೇಂದ್ರ ವಸ್ತು ಒಂದೇ ಆಗಿದ್ದರೂ ಅವುಗಳ ಅಭಿವ್ಯಕ್ತಿಯಲ್ಲಿ ವೈವಿಧ್ಯತೆ ಇದೆ. ನರಗುಂದದ ಘಟನೆಯ ಹಿನ್ನೆಲೆಯಲ್ಲಿ ಅವೆಲ್ಲ ಇತಿಹಾಸದ ಜೀವಂತ ಅಂಶಗಳನ್ನು ಹೊಂದಿದ್ದರಿಂದ ಅವುಗಳಿಗೂ ಐತಿಹಾಸಿಕ ಮಹತ್ವ ಪ್ರಾಪ್ತವಾಗಿದೆ. ಬಾಬಾಸಾಹೇಬನ ಪೂರ್ವವೃತ್ತಾಂತದ ಬಗೆಗೆ ಈ ಹಾಡುಗಳು ಅಂಥ ಯಾವುದೇ ವಿವರಗಳನ್ನು ಕೊಡುವುದಿಲ್ಲ. ಮತ್ತು ಪತನದ ನಂತರದ ಬಾಬಾಸಾಹೇಬನ ವೀರೋಚಿತವಾದ ಚಟುವಟಿಕೆಗಳನ್ನಾಗಲಿ, ಆತನ ಜೀವಿತದ ಕೊನೆಯ ಭಾಗದ ವಿವರಗಳನ್ನಾಗಲಿ ಕೊಡಲು ಅಸಮರ್ಥವಾಗಿವೆ. ಆದರೆ ನರಗುಂದದ ಬಂಡಾಯ ಹಾಗೂ ಪತನದ ಬಗೆಗಿನ ಸಾಧ್ಯವಾದ ವಿವರಣೆಗಳನ್ನು ಕೊಡುವುದರೊಂದಿಗೆ ಆ ಘಟನೆಯಿಂದ ಅಂದಿನ ಸಮಕಾಲೀನ ಸಾಮಾಜಿಕ ಜೀವನದ ಮೇಲಾದ ದುಷ್ಪರಿಣಾಮ ಮತ್ತು ಅನಾಹುತಗಳನ್ನೂ ತಿಳಿಸುವಲ್ಲಿ ಸಫಲವಾಗಿವೆ. ನರಗುಂದ ಬಂಡಾಯದ ಮುನ್ಸೂಚನೆಯನ್ನು ಅರುಹಿದವರು ನರಗುಂದ ವಿರಕ್ತಮಠದ ಶ್ರೀ ಮ. ನಿ. ಪ್ರ. ಲಿಂ. ಶ್ರೀ ಚನ್ನಬಸವ ಮಹಾಶಿವಯೋಗಿಗಳು—ಎಂದು ಕೃಷಿ ಜ್ಞಾನ ಪ್ರದೀಪಿಕೆಯ ಗ್ರಂಥ ಸಮರ್ಪಣದಲ್ಲಿ ಸೂಚಿಸಲಾಗಿದೆ. ನರಗುಂದ ಬಂಡಾ

ಯದ ಹಿನ್ನೆಯಲ್ಲಿ ಈ ವಿಚಾರ ವಿಚಾರಾರ್ಹವಾಗಿದ್ದು, ಈ ಕುರಿತು ಹೆಚ್ಚಿನ ಸಂಗತಿಗಳನ್ನೂ ಗಮನಿಸಬೇಕಾದ ಅಗತ್ಯವಿದೆ.

ಒಟ್ಟಾರೆ ನರಗುಂದ ಬಂಡಾಯ ಕುರಿತ ಎಲ್ಲ ಐತಿಹಾಸಿಕ ಜನಪದ ಗೀತೆಗಳಲ್ಲಿ—ಮಾರ್ಗ, ದೇಶಿ ಪದಗಳ ಬಳಕೆಯಿಂದಾಗಿ ಶಿಷ್ಟಜನಪದ ಹಾಡುಗಳು, ಮತ್ತು ಶುದ್ಧ ಜನಪದ ಹಾಡುಗಳೆಂಬ ಒಳಪದರುಗಳನ್ನು ಗುರುತಿಸಬಹುದಾಗಿದೆ. ಶಿಷ್ಟ ಪರಿಸರ ಹೊಂದಿದ ಅಕ್ಷರಸ್ಥರೆನಿಸಿಕೊಂಡ ನರಗುಂದ ಬಂಡಾಯದ ಐತಿಹಾಸಿಕ ಪ್ರಜ್ಞೆ ಹೊಂದಿದ ಸುಶಿಕ್ಷಿತರಿಂದಾದ ಆಧುನಿಕ ರಚನೆಗಳು, ಲಾವಣಿಗಳ ರೂಪದಲ್ಲಿ ಬಂದಿರುವುದು ಮತ್ತು ಅವು ಐತಿಹಾಸಿಕ ಘಟನೆಯ ಸಮಗ್ರ ವಿವರಗಳಿಂದ ಪರಿಪೂರ್ಣ ಲಾವಣಿಗಳಾಗಿರುವುದು ಒಂದನೆಯ ವಿಚಾರವಾದರೆ, ಶುದ್ಧವೆನ್ನಬಹುದಾದ ಜಾನಪದೀಯ ಆವರಣಹೊಂದಿದ ಅಶಿಕ್ಷಿತರೆನ್ನಿಸಿಕೊಂಡವರಿಂದ ಸೃಷ್ಟಿಯಾದ ಪಂತಿ, ಬೀಸುಕಲ್ಲು ಇತ್ಯಾದಿ ಹಾಡುಗಳು ಶುದ್ಧವಾದ ಜನಪದೀಯ ಮೌಲ್ಯವನ್ನು ಹೊಂದಿರುವುದು ಮತ್ತು ಐತಿಹಾಸಿಕವಾದ ಅರೆಕೊರೆ ವಿವರ ಹೊಂದಿದ ಅಪ್ರ ಅಪೂರ್ಣ ರಚನೆಗಳಾಗಿರುವುದು ಎರಡನೆಯ ವಿಚಾರ. ಒಟ್ಟಾರೆ ಹೇಳಬೇಕಾದುದಿಷ್ಟೇ; ಶಿಷ್ಟ ಜನಪದ ಕವಿಗಳ ಹಾಡುಗಳಲ್ಲಿ ಜಾನಪದ ಭಾಷೆಯ ಹದ ಹರಿತ ಮುರಿತಗಳ ಕೊರತೆ ಇದ್ದರೆ ಜಾನಪದ ಕವಿಗಳ ಹಾಡುಗಳಲ್ಲಿ ಐತಿಹಾಸಿಕ ಅವಜ್ಞೆ ಇದೆ.

# ೩. ಕ್ರಾಂತಿವೀರ ದೊರೆ ಬಾಬಾಸಾಹೇಬ

ನರಗುಂದದ ಸ್ವಾತಂತ್ರ್ಯ ಸಮರಶೂರನಾದ ಬಾಬಾ ಸಾಹೇಬನನ್ನು ಕುರಿತು ತಮ್ಮ ಹಾಡುಗಳಲ್ಲೆಲ್ಲ ಪ್ರೀತಿ ವಿಶ್ವಾಸ ಭಕ್ತಿಗೌರವಾದರಗಳನ್ನು. ಪತನದ ಬಗೆಗಿನ ಕಳವಳ ಸಿಟ್ಟು. ಕ್ರೋಧ, ಅನುಕಂಪ, ಅನುತಾಪಗಳನ್ನು. ನರಗುಂದ ಸಂಸ್ಥಾನದ ದೌಲತ್ತನ್ನು ಜನಪದ ಹಾಡುಗಾರರು ಹಾಡಿನ ಮೂಲಕ ದಿಕ್ಕು ದಿಕ್ಕಿಗೂ ಮೊಳಗಿದ್ದಾರೆ.

"ಕರ್ನಾಟಕದ ಕ್ರಾಂತಿವೀರಾ, ಸ್ವದೇಶಾಭಿಮಾನಿ
ಸಾಹಸಗಾರ ಸಮರಧೀರಾ.
ಬ್ರಿಟೀಷರ ಬಿಂಕ ಬಿಡಿಸಿದ ಬಹದ್ದೂರಾ"

ನರಗುಂದದ ಐತಿಹಾಸಿಕ ಘಟನೆಯ ಬೀಜ ಸದೃಶವಾದ ವಿಷಯವನ್ನು ಹಾಡಿನ ಮೂಲಕ ಸಂಕ್ಷೇಪಿಸಿ ಹೇಳಿದ ಜಾನಪದ ರೀತಿಯಿದು.

"ಹಾಳಾತೊ ಕೇಳಿರಿ ನರಗುಂದ
ಮೋಸಗಾರ ನೀಚ ಜನರಿಂದ"

ಇದು ನರಗುಂದಕ್ಕೆ ಒದಗಿದ ಅಂತಿಮ ಪರಿಣಾಮವನ್ನು ನಿಚ್ಚಳವಾಗಿ ಹೇಳಿದ ವೈಖರಿ. ಹೀಗೆ ನೇರವಾದ, ಸರಳ

ಮತ್ತು ಸ್ಪಷ್ಟವಾದ ಯಾವುದೇ ರೀತಿಯ ವ್ಯಾಖ್ಯಾನ ವಿವರಣೆ ಬಯಸದ ಇಲ್ಲಿಯ ಜನಪದ ಹಾಡುಗಳು—'ಬಾಬಾಸಾಹೇಬನ' ಅಗಾಧ ವ್ಯಕ್ತಿತ್ವವನ್ನು, ಬಂಡಾಯದ ಗೊತ್ತುಗುರಿಗಳ ಹಿನ್ನೆಲೆಯೊಂದಿಗೆ ಅಭಿವ್ಯಕ್ತಗೊಳಿಸಿವೆ. ಒಟ್ಟಾರೆ ಜಾನಪದರು ಕಂಡ ಬಾಬಾಸಾಹೇಬನ ಕಥೆ ಇಷ್ಟು.*

"ಸುಖಸಂಪತ್ತಿಗೆ ಆಗರವಾಗಿದ್ದ ನರಗುಂದ ಸಂಸ್ಥಾನದ ದೊರೆತನವು (ಕ್ರಿ.ಶ. ೧೮೪೨) ಭಾಸ್ಕರರಾವ್ ಅಪ್ಪಾಸಾಹೇಬ ಅವರಿಗೆ ಅಂದರೆ ಬಾಬಾಸಾಹೇಬರಿಗೆ ಬಂದಾಗ ನರಗುಂದದ ಆರ್ಥಿಕ ಸ್ಥಿತಿ ಮತ್ತೂ ಸುಧಾರಿಸಿತು. ಪ್ರಜೆಗಳು ಅರಸರ ಸೌಜನ್ಯ ಪೂರ್ಣ ಭಾವನೆಗೆ ಸಂತೃಪ್ತಗೊಂಡಿದ್ದರು. ಬಾಬಾಸಾಹೇಬರ ಸಂಸಾರ ಹಾಲು-ಜೇನಿನಂಥದು. ಬಾಬಾಸಾಹೇಬರ ವೀರ ಮಾತೆಯ ಹೆಸರು ಯಮುನಾಬಾಯಿ, ಅವರ ಧರ್ಮಪತ್ನಿಯ ಹೆಸರು ಸಾವಿತ್ರಿಬಾಯಿ. ಒಂದು ಗಂಡುಮಗುವಿನ ಸಂತಾನ ಪ್ರಾಪ್ತವಾದರೂ, ಆರು ತಿಂಗಳುಗಳಲ್ಲಿಯೇ ಕೂಸು ತೀರಿ ಕೊಂಡದ್ದರಿಂದ ಇಡೀ ಕುಟುಂಬವೇ ಚಿಂತೆಗೊಳಗಾಯಿತು. ಮುಂದೆ ಸಂತತಿಯೇ ಆಗದ್ದರಿಂದ ದತ್ತಕ ತೆಗೆದುಕೊಳ್ಳಲು ಯೋಚಿಸಲಾಯಿತು. ಆ ಸಮಯಕ್ಕಾಗಲೇ ಬಿಳಿಯರ ಅಧಿ ಕಾರಕ್ಕೆ ಒಳಗಾಗಿದ್ದ ನರಗುಂದ ಸಂಸ್ಥಾನದ ದೊರೆಗಳು ಯಾವುದಕ್ಕಾದರೂ ಅವರ ಅಪ್ಪಣೆಯನ್ನು ಪಡೆಯಬೇಕಾ ಗಿತ್ತು. ಆದ್ದರಿಂದ ಸಂತಾನವಿಲ್ಲದ ಸಂಸ್ಥಾನಕ್ಕೆ ದತ್ತಕ ತೆಗೆದುಕೊಳ್ಳಲು ಕಂಪನಿ ಸರಕಾರದ ಪರವಾನಿಗೆ ಅಗತ್ಯ ವಾಗಿತ್ತು. ಬಾಬಾಸಾಹೇಬನು ಈ ಪ್ರಕರಣದಲ್ಲಿ ಬಹಳಷ್ಟು ಪ್ರಯತ್ನಶೀಲನಾದ. ಮೊದಲು ಕೋರ್ಟಿನವರು ಪರವಾನಿಗೆ

ಕೊಟ್ಟರೇನೋ ನಿಜ, ಆಮೇಲೆ ಕಂಪನಿ ಸರಕಾರ ಈ ದತ್ತಕ ಪರವಾನಿಗೆಯನ್ನು ಮಾನ್ಯಮಾಡಲಿಲ್ಲ. ಸಂಸ್ಥಾನಿಕರ ಮೇಲೆ ಒಳಗಿಂದೊಳಗೇ ಉರಿಯುತ್ತಿದ್ದ ಬಿಳಿ ಅಧಿಕಾರಿ ಮ್ಯಾನ ಸನ್ ಸಾಹೇಬನೇ ಆ ಕಮೀಟಿಯ ಮುಖ್ಯಸ್ಥನಾದದ್ದರಿಂದ ಕೋರ್ಟಿನ ಆದೇಶಕ್ಕೂ ಬೆಲೆ ಸಿಗದಂತಾಯಿತು. ಹೀಗಾಗಿ ಬಾಬಾಸಾಹೇಬನ ರೋಷ, ಅಪಮಾನಗಳು ಸೇಡಾಗಿ ಪರಿಣ ಮಿಸಿದವು. ಈ ಮೊದಲೇ ಡಾಲಹೌಸಿಯ ಅನ್ಯಾಯದ ಆಳಿಕೆಯಿಂದಾಗಿ ಸಂಸ್ಥಾನಿಕರೆಲ್ಲರೂ ಮುಖಭಂಗಿತರಾಗಿದ್ದುದು ಬಾಬಾಸಾಹೇಬನ ಛಲಕ್ಕೆ ಮತ್ತೂ ಪುಟಕೊಟ್ಟಿತ್ತು. ಈ ಬಿಳಿಯರನ್ನು ಭಾರತದಿಂದ ತೊಲಗಿಸುವುದಕ್ಕಾಗಿ ಸಿಟ್ಟಿನ ಕೆಂಡವೇ ಆದ ಬಾಬಾಸಾಹೇಬ, ಕೋಟೆಯಲ್ಲಿ ಒಳಗಿಂದೊ ಳಗೇ ಗುಪ್ತವಾಗಿ ಅನ್ನ, ನೀರು, ಮದ್ದು ಗುಂಡು, ಆಯುಧ ಗಳ ಸಂಗ್ರಹ ಮಾಡತೊಡಗಿದ. ಭಾರತಮಾತೆಯ ಮುಕ್ತಿಗಾಗಿ ತನ್ನ ಸರ್ವಸ್ವವನ್ನೇ ಪಣಕ್ಕಿಡಲು ಕಂಕಣತೊಟ್ಟ. ಗೌಪ್ಯ ವಾಗಿದ್ದ ಈ ಕೋಟೆಯೊಳಗಿನ ಈ ಮಹತ್ವದ ವಿಷಯ ಹೇಗೋ ಕೆಲವು ಕ್ಷುಲ್ಲಕರಾದ ಜನ ಬಾಯೆಂಜಲದಾಸೆಗೆ ಆಗಿನ ಕಮೀಶನರ್ ಆಗಿದ್ದ ಜೇಕಬ್‌ನಿಗೆ ತಿಳಿಸಿದರು. ಜೇಕಬ್ ಅಂಜಿ ತಕ್ಷಣವೇ ತನ್ನ ಮೇಲಧಿಕಾರಿಯಾದ ಮ್ಯಾನಸನ್ ಸಾಹೇಬನಿಗೆ ಸುದ್ದಿ ಮುಟ್ಟಿಸಿದ. ಮ್ಯಾನಸನ್ ಆಗ ಪುಣೆ ಯಿಂದ ಚನ್ನಪಟ್ಟಣದವರೆಗಿನ ಪ್ರದೇಶದ ಮೇಲಾಧಿಕಾರಿ ಯಾಗಿದ್ದು–ತಕ್ಷಣವೇ ಒಂದು ಹಂಚಿಕೆ ಹೂಡಿದ. ಕೂಡಲೇ ಕಂಪನಿ ಸರಕಾರ ಹೊಸ ಕಾಯ್ದೆ ತಂದಿತು. "ಯಾರೂ ಬಂಡಾಯ ಏಳಬಾರದು, ತಮ್ಮಲ್ಲಿದ್ದ ಎಲ್ಲ ಶಸ್ತ್ರಾಸ್ತ್ರಗಳನ್ನೂ ಕಂಪನಿ ಸರಕಾರಕ್ಕೆ ಒಪ್ಪಿಸಬೇಕು" ಎಂಬ ಕಂಪನಿ ಸರಕಾರದ

ಈ ಕಟ್ಟಾಜ್ಞೆಗೆ ಎಲ್ಲ ಸಂಸ್ಥಾನಿಕರೂ ಕಳವಳಗೊಂಡರು. ಆದರೆ ಬಾಬಾಸಾಹೇಬ ಮಾತ್ರ ಚಿಂತೆಯೊಳಗಿದ್ದೂ ಛಲ ಸಾಧಿಸಲು ಮುಂದಾದ. ಸಂಸ್ಥಾನಿಕರಿಂದ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಳ್ಳಲು ಕಂಪನಿ ಸರಕಾರವು ಲೆಸ್ಟರ್ ಎಂಬವನನ್ನು ನೇಮಿಸಿತ್ತು. ಬಾಬಾಸಾಹೇಬನು ಆವರ ಅಪ್ಪಣೆಯನ್ನು ಮಾನ್ಯ ಮಾಡುವವನಂತೆ ಹಂಚಿಕೆ ಹಾಕಿ ಕೆಲವೊಂದು ಶಸ್ತ್ರಾಸ್ತ್ರಗಳನ್ನು ಕಳಿಸಿದ. ಆದರೆ ನಡುದಾರಿಯಲ್ಲಿಯೇ ಒಯ್ಯುವವರನ್ನು ಬಗ್ಗು ಬಡಿದು ಅವುಗಳನ್ನೆಲ್ಲ ಕಸಿದು ತರುವಂತೆ ತನ್ನವರಿಗೆ ಮೊದಲೇ ಸೂಚನೆ ಕೊಟ್ಟಿದ್ದನಂತೆ. ಈ ಹೊಂಚೂ ಕೂಡಾ ಕೇಡಿಗಳಿಂದ ಲೆಸ್ಟರ್‌ನಿಗೆ ತಿಳಿಯಿತು. ಕೂಡಲೇ ಆತ ಜೇಕಬ್‌ನಿಗೆ ತಿಳಿಸಿದ. ಜೇಕಬ್‌ನು ಆಗ ಕುರಂದವಾಡಲ್ಲಿದ್ದ ಮ್ಯಾನಸನ್‌ನಿಗೆ ತಿಳಿಸಿದ. ಮ್ಯಾನಸನ್ ಸಾಹೇಬನು ಸಿಟ್ಟಾಗಿ ತನ್ನ ಸೈನಿಕರೊಂದಿಗೆ ರಾಮದುರ್ಗ ಸಂಸ್ಥಾನಕ್ಕೆ ಧಾವಿಸಿ ಬಂದು ಅಲ್ಲಿಯ ರಾವಸಾಹೇಬನನ್ನು ಒಳಗೆ ಹಾಕಿಕೊಂಡ. ಆತನಿಗೆ ಮೊದಲ ಬಲಿಯಾದ ರಾಮದುರ್ಗದ ರಾವಸಾಹೇಬನನ್ನು ಬಾಬಾಸಾಹೇಬನನ್ನು ಬಗ್ಗು ಬಡೆಯಲು ಬಳಸಿಕೊಳ್ಳುವ ಸನ್ನಾಹದಲ್ಲಿಯೂ ಸಫಲನಾದ. ಅಲ್ಲಿಂದ ಸುರೇಬಾನಕ್ಕೆ ಬಂದು ಒಂದು ಧರ್ಮಶಾಲೆಯಲ್ಲಿ ಬಿಡಾರ ಹೂಡಿದ್ದ. ಈ ಸಂಗತಿಯನ್ನೆಲ್ಲ ತನ್ನ ಗುಪ್ತಚಾರರಿಂದ ತಿಳಿದ ಬಾಬಾಸಾಹೇಬನು ಮ್ಯಾನಸನ್ ಸಾಹೇಬರನ್ನು ಕಾಣಲು ಹೋಗುವ ನೆಪದಲ್ಲಿ ತನ್ನ ೮೦೦ ಜನ ಸೈನಿಕರೊಂದಿಗೆ ಸುರೇಬಾನಕ್ಕೆ ಬಂದ, ಮಾತುಕತೆ ವಿಫಲವಾಗುತ್ತಲೇ ಧರ್ಮಶಾಲೆಗೇನೇ ಮುತ್ತಿಗೆ ಹಾಕಿದ. ಮ್ಯಾನಸನ್ ಕೂಡಾ ಹೆದರದೇ ಸೈನಿಕರ ಮೇಲೆ ಗುಂಡು ಹಾರಿಸುತ್ತ, ಸೈನಿಕರನ್ನು ಹೆದರಿಸುತ್ತ

ಕಿಮ್ಮೆಟ್ಟಿ ಓಡಿಹೋಗಿ ಸುರೇಬಾನದ ಮಾರುತಿ ಗುಡಿಯಲ್ಲಿ ಹೊಕ್ಕು ತಲೆಮರೆಸಿಕೊಂಡ. ಬಾಬಾಸಾಹೇಬನ ಸೈನ್ಯ ಆವ ನನ್ನು ಬೆನ್ನು ಹತ್ತಿ ಹುಡುಕುತ್ತ ಮಾರುತಿಗುಡಿಯ ಹತ್ತಿರ ಬಂದಾಗ, ಗುಡಿಯ ಬಾಗಿಲು ಹಾಕಿದ್ದನ್ನು ಕಂಡು ಲೆಕ್ಕ ಹಾಕಿದರು. ವಿಷ್ಣು ಕುಲಕರಣಿ ಎಂಬ ತರುಣ ವೀರನೊಬ್ಬ ಗುಡಿಯ ಬಾಗಿಲವನ್ನು ಒದ್ದು ಮುರಿದು ಒಳಹೊಕ್ಕು ನೋಡಿದಾಗ ಮ್ಯಾನಸನ್ ಗುಡಿಯ ಮೂಲೆಯೊಂದರಲ್ಲಿ ನಡುಗುತ್ತ ಕುಳಿತಿದ್ದ. ಕೂಡಲೇ ವಿಷ್ಣು ಕುಲಕರಣಿ ಮುಂದಾಗಿ ಮ್ಯಾನಸನ್ನನನ್ನು ದರದರನೇ ಎಳೆದೆಳೆದು ತಂದು ರುಂಡವನ್ನೇ ಕೊಯ್ದುಹಾಕಿದ. ಮ್ಯಾನಸನ್ ಸೈನ್ಯ ಆಗಲೇ ಫಲಾಯನ ಮಾಡಿತ್ತು. ಮ್ಯಾನಸನ್ ಸಾವಿನ ಸುದ್ದಿಗೆ ನರಗುಂದ ಸೈನ್ಯವು ಜಯಕಾರ ಹಾಕಿತು. ಆತನ ರುಂಡವನ್ನೇ ಮೆರೆಸುತ್ತ ನರಗುಂದದ ಅಗಸೆ ಬಾಗಿಲಿಗೆ ಕಟ್ಟಿ ವೀರೋತ್ಸಾಹ ಮೆರೆಯಿತು.

ಮ್ಯಾನಸನ್ ಸಾವಿನ ಈ ಘಟನೆಯೇ ನರಗುಂದ ಬಂಡಾಯಕ್ಕೆ ನಾಂದಿಯಾಯಿತು. ನರಗುಂದದ ಪತನಕ್ಕೆ ಬೀಜವಾಯಿತು. ಇಡೀ ಕಂಪನಿ ಸರಕಾರವೇ ಈ ದಾರುಣ ಘಟನೆಯಿಂದ ತತ್ತರಿಸಿತು. ನರಗುಂದ ಸಂಸ್ಥಾನವನ್ನೇ ಸಂಪೂರ್ಣವಾಗಿ ಬಗ್ಗು ಬಡೆಯಲು ನಿರ್ಧಾರ ಮಾಡಿತು. ಮ್ಯಾನಸನ್ನನ ಸಾವು ಯುದ್ಧಕ್ಕೆ ಆಮಂತ್ರಣವಿಟ್ಟಂತಾಯ್ತು. ಬಾಬಾಸಾಹೇಬ ತನ್ನ ಜನರನ್ನೆಲ್ಲ ಹುರಿದುಂಬಿಸಿ ಯುದ್ಧಕ್ಕೆ ಸಿದ್ಧರಾಗಲು ಸಜ್ಜುಗೊಳಿಸಿದ್ದ. ತನ್ನ ನೆರೆಹೊರೆಯ ಸಂಸ್ಥಾನಿಕ ಮಿತ್ರರಾದ ಮುಂಡರಗಿ ಭೀಮರಾಯನಿಗೂ, ಸುರಪುರ ನಾಯಕರಿಗೂ ಸಹಾಯಕೋರಿ ಪತ್ರ ಬರೆದು ಒಲಿಸಿಕೊಂಡಿದ್ದ.

ಮ್ಯಾನಸನ್ ಕೊಲೆಯ ನಂತರ ಆತನ ಹತ್ತಿರವೇ ಸಿಕ್ಕ ಕೆಲವು ಕಾಗದಪತ್ರಗಳಿಂದ—ತನ್ನ ವಿರುದ್ಧ ಪಿತೂರಿ ನಡೆಸಿ ಬಿಳಿಯರೊಂದಿಗೆ ಶಾಮೀಲಾದ ಕೃಷ್ಣಾಜಿಪಂಥ ಜೋಶಿ ಹಾಗೂ ಬನ್ನ್ಯಾಬಾಪು ಎಂಬಿಬ್ಬರನ್ನು ಕರೆಸಿ ಕ್ರಮ ಕೈಕೊಂಡು ಎಚ್ಚರಿಕೆಯಿಂದ ಯುದ್ಧಸನ್ನಾಹ ನಡೆಸಿದ್ದ.

ಇತ್ತ ಆಂಗ್ಲರು–ನರಗುಂದವನ್ನು ಪಶಪಡಿಸಿಕೊಳ್ಳುವುದಕ್ಕಾಗಿ ಮಾಲ್ಕಮ್ ಸಾಹೇಬನನ್ನು ನಿಯಮಿಸಿದರು. ಬಾಬಾಸಾಹೇಬನನ್ನು ಹೆಡಮುರಿಗೆ ಕಟ್ಟಿತರುವುದಾಗಿ ಪಣತೊಟ್ಟು, ಆಧುನಿಕ ಶಸ್ತ್ರಾಸ್ತ್ರಗಳೊಂದಿಗೆ ಸುಸಜ್ಜಿತನಾಗಿ ಸಾಗಿ ಬಂದ ಮಾಲ್ಕಮ್ ಸಾಹೇಬನು ನರಗುಂದಕ್ಕೆ ಮುತ್ತಿಗೆ ಹಾಕಿದ. ಭೀಕರವಾದ ಕದನ; ನರಗುಂದದ ಪ್ರಜೆಗಳನ್ನು ಹುರಿದುಂಬಿಸುತ್ತ ಯುದ್ಧಕ್ಕೆ ಅಣಿಯಾಗಿದ್ದ ಬಾಬಾಸಾಹೇಬ ಮುನ್ನುಗ್ಗುತ್ತಿದ್ದ. ಆದರೆ ಮಾಡುವುದೇನು ? ಕೃಷ್ಣಾಜಿಪಂಥ ಬನ್ನ್ಯಾಬಾಪು ಅವರ ಪಿತೂರಿಯಿಂದ ಮದ್ದಿನಲ್ಲಿ ಸೆಗಣಿ ಮಣ್ಣು ಬೆರಕೆಯಾದದ್ದರಿಂದ ನರಗುಂದದ ತೋಪುಗಳು ಹಾರದೇ ಹೋದವು. ಬಿಳಿಯರ ತೋಪುಗಳ ಕೈಮೇಲಾಗಿ ಕೋಟೆಗಳ ಗೋಡೆಗಳು ಬಿರಿಯುಹತ್ತಿದಾಗ ಬಾಬಾಸಾಹೇಬ ಹಕ್ಕಿಯಂತೆ ಬಾಯ್ಬಿಟ್ಟ ಮನದೊಳಗೇ ಆಲ್ಪರಿದ. ಬಿಳಿಯರ ಆಧುನಿಕ ಶಸ್ತ್ರಗಳ ಮುಂದೆ ನರಗುಂದದ ಹಳೆಯ ಶಸ್ತ್ರಾಸ್ತ್ರಗಳ ಆಟ ನಡೆಯದೇ ಹೋಯಿತು. ಅಷ್ಟಾದರೂ ಧೈರ್ಯಗೆಡದೆ ತನ್ನವರನ್ನು ಹುರಿದುಂಬಿಸುತ್ತ–"ಹಿಂದಕ ಸರಿದು ಆಗಬ್ಯಾಡ್ರಿ ಸುಮಾರಾ, ಸ್ವಾತಂತ್ರ್ಯ ಸಲುವಾಗಿ ಹೋರಾಡಿ ಉಳಿಸಿರಿ ಹೆಸರಾ" ಎಂದು ಸಾರುತ್ತ ಸಾಗಿದ ಬಾಬಾಸಾಹೇಬನ ಆವೇಶಪೂರ್ಣ

ಆದೇಶಕ್ಕೆ ಜನ ಮುನ್ನುಗ್ಗಿದರು. ಆದರೆ ವೈರಿಗೆ ಬೆನ್ನು ತೋರಿಸದೇ ನರಗುಂದದ ವೀರಭಟರೆಲ್ಲ ಒಬ್ಬೊಬ್ಬರಾಗಿ ಯಮನ ಕಡೆಗೆ ಸಾಗಿದರು. ಕೆಲವರು ತಾವಾಗಿ ಬಿಳಿಯರಿಗೆ ಶರಣಾಗತರಾದರು. ಪ್ರಸಂಗವೇ ವಿಪರೀತವಾದದ್ದನ್ನು ಕಂಡ ಬಾಬಾಸಾಹೇಬ ಗತಿ ಇಲ್ಲದೇ ಅಲ್ಲಿಂದ ತಲೆಮರೆಸಿಕೊಂಡು ಪಾರಾಗಿ ಹೋದ. ಯುದ್ಧದ ವಾರ್ತೆ ಹಾಗೂ ಪರಿಣಾಮ ತಿಳಿದ ಬಾಬಾಸಾಹೇಬನ ತಾಯಿ ಯಮುನಾಬಾಯಿ, ಪತ್ನಿ ಸಾವಿತ್ರಿಬಾಯಿ, ಅತ್ತೆ-ಸೊಸೆ ಇಬ್ಬರೂ ಬಾಬಣ್ಣನಿಗಾಗಿ ಕಣ್ಣೀರು ತಂದು, ವೆಂಕಟಸ್ವಾಮಿಯನ್ನು ನೆನೆದು ಅನ್ಯರ ಕೈಯಲ್ಲಿ ಅಪಮಾನವಾಗಬಾರದೆಂದು ನಿರ್ಧರಿಸಿ–ಅರಮನೆ ಯಿಂದ ಹೊರಟು ಒಬ್ಬರಿಗೊಬ್ಬರು ಅಪ್ಪಿಕೊಂಡು ಮಲ ಪ್ರಭಾ ನದಿಯಲ್ಲಿ ಪ್ರಾಣಾರ್ಪಣೆ ಮಾಡಿದರು. ಇತ್ತ ಬಿಳಿಯ ರಿಂದ ತಪ್ಪಿಸಿಕೊಂಡು ಓಡಿಹೋದ ಬಾಬಾಸಾಹೇಬನನ್ನು ಪತ್ತೆಹಚ್ಚಲು ತಕ್ಷಣವೇ ಆಂಗ್ಲ ಸರಕಾರವು ಫ್ರಾಂಕ್‌ಸೂಟರ್ ಎಂಬವನನ್ನು ನೇಮಿಸಿತ್ತು. ಎಲ್ಲ ಕಡೆಗೂ ವೇಷಧಾರಿಗಳಾದ ಗುಪ್ತಚಾರರು ಬಾಬಾಸಾಹೇಬನನ್ನು ಹಿಡಿಯಲು ತವಕಿಸುತ್ತಿ ದ್ದರು. ಬಾಬಾಸಾಹೇಬ ನರಗುಂದದಿಂದ ವೇಷ ಮರೆಸಿಕೊಂಡು ಹೋಗಿ ತೊರಗಲ್ಲದ ಗೌಡರ ಮನೆಯಲ್ಲಿ ಆಶ್ರಯ ಪಡೆದಿದ್ದ. ಆದರೆ ಅಲ್ಲಿಯೂ ಕೆಲವು ಕುಹಕಿಗಳಿಂದ ಗುಟ್ಟುರಟ್ಟಾಯಿತು. ಕೂಡಲೇ ಆಂಗ್ಲ ಅಧಿಕಾರಿಗಳು ಗೌಡರ ಮನೆಯಲ್ಲಿದ್ದ ಬಾಬಾ ಸಾಹೇಬನನ್ನು ಬಂಧಿಸಿ ಬೆಳಗಾಂವಿಗೆ ತಂದು, ಮ್ಯಾನಸನ್ ಸಾಹೇಬನ ಕೊಲೆಯ ಆರೋಪ ಹೊರಿಸಿ ಗಲ್ಲಿಗೇರಿಸಿದರು. ಅಷ್ಟೇ ಅಲ್ಲ; ಇತ್ತ ನರಗುಂದದಲ್ಲಿ ಸಂಶಯದ ಮೇಲೆ ಅದೆಷ್ಟೋ ನಿರಪರಾಧಿಗಳನ್ನು ಕೊಲ್ಲಲಾಯಿತು. ಲೂಟಿ,

ಸುಲಿಗೆ, ದೊಂಬೆಗಳೂ ಆಂಗ್ಲರಿಂದ ನಡೆದು ಹೋದವು, ಸಮೃದ್ಧಿಯ ಊರು ನರಗುಂದ, ಸ್ಮಶಾನ ಸದೃಶವಾಯಿತು."

ನರಗುಂದದ ಬಂಡಾಯ ಕುರಿತ ಈ ಮೇಲಿನ ಮೂಲ ಭೂತ ಐತಿಹಾಸಿಕ ಘಟನೆಯಲ್ಲಿಯೇ ಹಲವಾರು ಮಾರ್ಪಾಟುಗಳಿರುವುದನ್ನು ಅಲ್ಲಿಯ ಜನಪದ ಹಾಡುಗಳಲ್ಲಿ ಕಾಣುತ್ತೇವೆ.

ಘಟನೆಗೆ ಸಂಬಂಧಿಸಿದ ವಿವರಗಳು, ವ್ಯಕ್ತಿ-ಊರು ಹೆಸರುಗಳು, ಇತ್ಯಾದಿಗಳಲ್ಲಿ ಭಿನ್ನತೆ ಒಡೆದು ಕಾಣುತ್ತಿರುವುದು-ಅಧ್ಯಯನಯೋಗ್ಯವೆನಿಸಿದೆ. ಉದಾಹರಣೆಗಾಗಿ ಕೆಲವೊಂದನ್ನು ಇಲ್ಲಿ ಅವಲೋಕಿಸಬಹುದಾಗಿದೆ—

(೧) ಮ್ಯಾನಸನ್ ಸಾಹೇಬನನ್ನು ಕೊಂದು ರುಂಡ ಕತ್ತರಿಸಿದವನು ವಿಷ್ಣು ಕುಲಕರಣಿ ಎಂದಿದ್ದರೆ, ಇನ್ನೊಂದು ಹಾಡಿನಲ್ಲಿ "ವೀಣ್ಯಾತಾಂಡೇದ ಭಂಟ ಕಣ್ಣಿಟ್ಟು ಶಿರಕೊಯ್ದ, ಮಣ್ಣುಪಾಲಾದ ಮೆಣಸನ್ನ" ಎಂದಿದೆ.

(೨) ಬನ್ಯಾಬಾಪು, ಕೃಷ್ಣಾಜಿಪಂಥ ಜೋಶಿ ಎಂಬಿಬ್ಬರೇ ದೇಶದ್ರೋಹಿಗಳೆಂದು ಎಲ್ಲ ಹಾಡುಗಳಲ್ಲಿ ಉಕ್ತವಾದರೆ ಒಂದು ಹಾಡಿನಲ್ಲಿ 'ಗೋಲಂದಾಜ' ಎಂಬ ಮತ್ತೊಂದು ಹೆಸರು ಉಕ್ತವಾಗಿದೆ.

(೩) ಆಂಗ್ಲರ ಕಡೆಯಿಂದ ಶಸ್ತ್ರಾಸ್ತ್ರ ವಶಪಡಿಸಿ

ಕೊಳ್ಳಲು ಬಂದವನು ಲೆಸ್ಟರ್ ಎಂದು ಒಂದು ಹಾಡಿನಲ್ಲಿದ್ದರೆ, ಇನ್ನೊಂದರಲ್ಲಿ 'ಗೋರಾಸಾಹೇಬ' ಎಂದಿದೆ.

(೪) ಬಾಬಾಸಾಹೇಬನ ಮಂತ್ರಿಯ ಹೆಸರು 'ರಾಘೋಬ' ಎಂಬುದನ್ನು ಒಂದು ಹಾಡಿನಲ್ಲಿ ಮಾತ್ರ ನಮೂದಿಸಲಾಗಿದೆ.

(೫) ಬಹಳ ಮಹತ್ವದ ಸಂಗತಿಯೆಂದರೆ—ಬಾಬಾಸಾಹೇಬನ ಮರಣಕ್ಕೆ ಸಂಬಂಧಿಸಿದುದು. ಈ ಬಗ್ಗೆ ಅನೇಕ ರೀತಿಯ ಹೇಳಿಕೆಗಳು, ವದಂತಿಗಳು ಜಾನಪದದಲ್ಲಿವೆ.

ಅ) ಆಂಗ್ಲರು ಬಾಬಾಸಾಹೇಬನನ್ನು ಹಿಡಿಯಲು ಹೋಗಿ ವೇಷಧಾರಿಯಾಗಿದ್ದ ಬೇರೊಬ್ಬನನ್ನು ಹಿಡಿದು—ಅವನೇ ಬಾಬಾಸಾಹೇಬನೆಂದು ಗಲ್ಲಿಗೇರಿಸಿದರಂತೆ—ಈ ವಿಷಯ ಆಂಗ್ಲರಿಗೆ ತಿಳಿದಿದ್ದರೂ ಜನಸಾಮಾನ್ಯರಿಗೆ ತಮ್ಮ ತಪ್ಪು ತೋರದ ರೀತಿಯಲ್ಲಿ ಹಾಗೆ ಮಾಡಿದರು ಎಂದು ಒಂದು ಲಾವಣಿಯಲ್ಲಿದೆ.

ಬ) ಆದರೆ—ಇದು ನಿಜವಿದ್ದ ಪಕ್ಷದಲ್ಲಿ ಬಾಬಾಸಾಹೇಬನು ತೊರಗಲ್ಲಿನಿಂದ ತಲೆಮರೆಸಿಕೊಂಡು ಬಂಕಾಪುರದಲ್ಲಿ ವಾಸವಾಗಿದ್ದನೆಂದೂ ಅಲ್ಲಿಯೇ ತನ್ನ ಕೊನೆ ಭಾಗ ಜೀವಿಸಿದ್ದನೆಂದೂ ಅಲ್ಲಿ ನರಗುಂದದ ಬಾಬಾಸಾಹೇಬನ ಸ್ಮಶಾನಗಟ್ಟಿ ಇರುವುದನ್ನೂ, ಬಾಬಾ

ಸಾಹೇಬನ ವೇಷಭೂಷಣಗಳೂ ಅಲ್ಲಿ ನೋಡ ಸಿಗುತ್ತವೆಂಬ ಹೇಳಿಕೆಗಳನ್ನೂ ಇತ್ತೀಚೆಗೆ ಕೇಳಿ ತಿಳಿದಿದ್ದೇನೆ.

ಕ) ಬಾಬಾಸಾಯ್ಬ ದೌಲತ್ತು ಬಿಟ್ಟು ಹ್ವಾದಾ
ದೇವಾಜಿ ಹೊಂಡ ಮುಳುಗಿದಾ–
ಒಂದು ಹಾಡು ತಿಳಿಸುವ ವಿಚಾರ.

ಡ) ಗಲ್ಲಿಗೇರಿಸಲಾಯಿತು —ಇತಿಹಾಸದ ವಿಚಾರ.

(೬) ಅ) ಅತ್ತೆ-ಸೊಸೆ ಇಬ್ಬರೂ ಮಲಪ್ರಭಾ ನದಿಯಲ್ಲಿ ಹಾರಿ ಪ್ರಾಣಾರ್ಪಣೆ ಮಾಡಿಕೊಂಡದ್ದನ್ನು ಬಹುತೇಕ ಎಲ್ಲ ಲಾವಣಿ, ಬಿಡಿ ಹಾಡುಗಳೂ ತಿಳಿಸುತ್ತವೆ. ಆದರೆ ಈ ಘಟನೆಗೆ ಮುಂದುವರಿಕೆಯಾಗಿ ಕೆರೂರು ಮಾಲಕರಿ ಹುಕುಂ ತರಿಸಿ ಅವರಿಬ್ಬರನ್ನೂ ಶಾಸ್ತ್ರಬದ್ಧವಾಗಿ ದಹನ ಮಾಡಿದ ಸಂಗತಿಯೊಂದನ್ನು 'ನರವೀರ' ಎಂಬ ಲಾವಣಿ ತಿಳಿಸುತ್ತದೆ.

ಬ) ಸೊಸೆಯು ಹೆಸರು 'ಸಾವಿತ್ರಿಬಾಯಿ' ಎಂದು ಎಲ್ಲ ಹಾಡುಗಳ ಅಭಿಪ್ರಾಯವಿದ್ದರೆ–ಒಂದರಲ್ಲಿ 'ಲಕ್ಷ್ಮೀಬಾಯಿ' ಎಂದಿದೆ. ಅದು ಸಾವಿತ್ರಿಬಾಯಿಗೆ ಸಂಬಂಧಿಸಿದ ವಿಶೇಷಣವಾಗಿರಬಹುದೇನೋ !

(೭) ಬಾಬಾಸಾಹೇಬನ ಕೋರಿಕೆಯಂತೆ ಮುಂಡರಗಿ ಭೀಮರಾಯ ಹಾಗೂ ಸುರಪುರ ನಾಯಕರು ಬಾಬಾಸಾಹೇಬನ ಸಹಾಯಕ್ಕಾಗಿ ಬಂದು ಬಂಡಾಯದಲ್ಲಿ ಮಡಿದರೆಂಬ ಸಂಗತಿಯನ್ನು ಎಲ್ಲ ಲಾವಣಿಗಳೂ ತಿಳಿಸುತ್ತವೆ. ಆದರೆ ಒಂದು ಹಾಡಿನಲ್ಲಿ ಮಾತ್ರ "ಕೊಟ್ಟಮಾತು ತಪ್ಪಿ ಮೋಸ ಮಾಡಿದನು, ಮುಂಡರಗಿ ಭೀಮರಾಯ ನನ-ಗೀಗ" – ಎಂದು ಬಾಬಾಸಾಹೇಬ ಪರಿತಪಿಸುತ್ತಾನೆ.

(೮) ಬಾಬಾಸಾಹೇಬನ ಮರಣ ಹಾಗೂ ಸಂಸ್ಥಾನದ ಪತನದ ಹಿನ್ನೆಲೆಯಲ್ಲಿ — ವಿಚಾರಿಸಬಹುದಾದ ಒಂದು ತ್ರಿಪದಿಯ ಬಗ್ಗೆ ಹಾಡುಗಳಲ್ಲಿ, ಘಟನಾವಳಿಗಳಲ್ಲಿ ಯಾವ ವಿಶಿಷ್ಟ ವಿಚಾರವೂ ತಿಳಿಯದು.

"ಹೂಲಿಸ್ವಾಮಿಯು ಕೊಟ್ಟ ಕೋಲಮಿಂಚಿನ ಶ್ಯಾಪ
ಗಾಲ ಮೇಲಾತೊ ನರಗುಂದೊ । ಮರುವರುಷ
ಕೂಲಿ ಕುಂಬಳಿಗೆ ಎರವಾತೋ ।

—ಇದೇ ಆ ತ್ರಿಪದಿ

ಹೂಲಿಸ್ವಾಮಿಗಳ ಶಾಪದ ಸಂಗತಿಯನ್ನು ಹಂತೀಪದದ ಒಂದು ತ್ರಿಪದಿ ಮಾತ್ರ ತಿಳಿಸುತ್ತದೆ. ಈ ತ್ರಿಪದಿಗೆ ಹಿನ್ನೆಲೆಯ ವಿಚಾರಕ್ಕೆ

ಯಾವ ಊಹೆಯೂ ಸದ್ಯಕ್ಕೆ ಸೂಕ್ತವಾದಂತೆ ತೋರುವುದಿಲ್ಲ. ಒಂದು ಸಂಗತಿಯನ್ನು ಮಾತ್ರ ಈ ಹಿನ್ನೆಲೆಯಲ್ಲಿ ಊಹಿಸಬಹುದೇನೋ ! ನರಗುಂದ ಬಾಬಾಸಾಹೇಬನಿಗಿಂತ ಮೊದಲು ದೊರೆಯಾಗಿದ್ದ ಆತನ ತಂದೆಯ ಕಾಲಕ್ಕೆ ನರಗುಂದವು ಕ್ಷೀಣದೆಸೆ ಹೊಂದಿತ್ತು ಎಂಬುದನ್ನು ಇತಿಹಾಸ ಹೇಳುತ್ತದೆ. ಅದಲ್ಲದೆ ಆತನು ದುರ್ವ್ಯವಹಾರಿಯೂ ಆಗಿದ್ದನೆಂಬುದು ಇತಿಹಾಸದ ಭಾವನೆ. ಈ ಕಾರಣವೇ 'ಹೂಲಿಸ್ವಾಮಿಗಳು'-ದೊರೆಗೆ ಶಾಪಕೊಡಲು ಕಾರಣವಾಗಿರಬಹುದೇ ?

(೯) ನರಗುಂದ ಬಂಡಾಯದ ನಿಶ್ಚಿತವಾದ ಕಾಲವನ್ನು ಯಾವ ಹಾಡೂ ತಿಳಿಸುವುದಿಲ್ಲ. ಕೇವಲ ರವಿವಾರ, ಸೋಮವಾರ, ಮಂಗಳವಾರ ಈ ೩ ದಿನಗಳಲ್ಲಿ ಮಾತ್ರ ಬಂಡಾಯ, ಹಾಗೂ ಪತನವಾಯಿತೆಂದು ಮಹತ್ವದ ವಿಚಾರ ತಿಳಿಸುತ್ತವೆ. ಕ್ರಿ. ಶ. ೧೮೫೭-೫೮ ಬಂಡಾಯದ ಕಾಲವೆಂದು ಇತಿಹಾಸ ಹೇಳುತ್ತದೆ. ಹೀಗೆ ಹಲವು ಹತ್ತು ರೀತಿಯ ಸೂಕ್ಷ್ಮ ವ್ಯತ್ಯಾಸಗಳು, ತೊಡರು-ತೊಡಕುಗಳು, ನೈಜ ಇತಿಹಾಸ ಹಾಗೂ ಜಾನಪದರು ತಿಳಿದ ಇತಿಹಾಸದ ತರತಮಗಳನ್ನು ಎತ್ತಿತೋರಿಸುತ್ತವೆ. ಮತ್ತು ವಾಸ್ತವಪೂರ್ಣವಾಗಬೇಕಾದ ಘಟನೆಗೆ ಸಂದಿಗ್ಧ ಅರ್ಥಹುಟ್ಟಲು ಕಾರಣವಾಗುತ್ತವೆ. ಜಾನಪದ ಭಾವನೆಗಳ ಸಂಕೀ

ರ್ಣತೆ ಇತಿಹಾಸಕ್ಕಿರುವುದಿಲ್ಲವೆಂಬುದನ್ನು ಮಾತ್ರ ಮರೆಯಬಾರದು.

(೧೦) ನರಗುಂದದಿಂದ ವೇಷ ಮರೆಸಿಕೊಂಡು ಪಲಾಯನ ಮಾಡಿದ ಬಾಬಾಸಾಹೇಬನು ತನ್ನ ತಾಯಿ, ಹೆಂಡತಿಗೆ ಹೇಳಿ ಹೋದರೆ, ಇನ್ನು ಕೆಲವು ಹಾಡುಗಳಲ್ಲಿ ಆ ಪ್ರಸ್ತಾಪವೇ ಇಲ್ಲ.

## ೪. ಬಾಬಾಸಾಹೇಬ ಮತ್ತು ಜನಪದ ಭಾವಸಂಪತ್ತು

ನರಗುಂದದ ಐತಿಹಾಸಿಕ ಜನಪದ ಗೀತೆಗಳೆಲ್ಲವೂ ಸಂಸ್ಥಾನದ ಸಂಪತ್ತು. ಆ ಸಂಪತ್ತಿಗೆ ಕಾರಣೀಭೂತನಾದ ಜನಪ್ರಿಯ ದೊರೆ ಬಾಬಾಸಾಹೇಬ. ಆತನ ನಾಡು, ನುಡಿ, ದೇಶಭಕ್ತಿ, ಸ್ವಾತಂತ್ರ್ಯಪ್ರೇಮ, ವೀರೋಚಿತ ಸಾಹಸಮನೋವೃತ್ತಿ, ಅದಲ್ಲದೆ-ನಿಷ್ಠಾವಂತ ಪ್ರಜಾಸಮೂಹ, ದೇಶದ್ರೋಹಿ ಹಿತಶತ್ರುಗಳ ಪಿತೂರಿ-ಇತ್ಯಾದಿಗಳೆಲ್ಲವನ್ನೂ ಮೇಳವಿಸಿಕೊಂಡು ವಿಜೃಂಭಿಸಿವೆ. ಇವುಗಳಲ್ಲೆಲ್ಲಾ ಎದ್ದುಕಾಣುವ ಮೂಲಗುಣವೆಂದರೆ-ಹಾಡುಗಾರರು ಆ ವಸ್ತುವಿನ ಬಗೆಗೆ ತಾಳಿದ ಆತ್ಮೀಯತೆ. ಜನಪದ ಕಾವ್ಯಸಂಪತ್ತಿನ ದೃಷ್ಟಿಯಿಂದ ಅದೆಷ್ಟೋ

ರಚನೆಗಳು ಕಾವ್ಯಭಾವರಸರಹಿತ ರಚನೆಗಳಾಗಿದ್ದರೂ ವಿಷಯ ವಸ್ತುವಿನ ವಾಸ್ತವಿಕ ಸಂಗತಿಗಳಿಗೆ ಆಕರವಾಗುವ ಸಾಧ್ಯತೆಯನ್ನು ಅಂಥವೂ ಪಡೆದುಕೊಳ್ಳುವುದುಂಟು. ಹೀಗಾಗಿ ಭಾವಸಂಪತ್ತನ್ನು, ಐತಿಹಾಸಿಕ ನೈಜ ಸಂಗತಿಗಳ ಆಳ ಅಂತರಂಗವನ್ನು ಮುಕ್ಕಳಿಸಿಕೊಂಡು, ಜಾನಪದೀಯ ಭಾಷೆ, ಭಾವ ಬೆಡಗು ಬಿನ್ನಾಣಗಳನ್ನು ತೊನೆಯುವ ಹಾಡುಗಳು ಒಂದರ್ಥದಲ್ಲಿ ಇಲ್ಲವೆಂದೇ ಹೇಳಬೇಕಾಗುತ್ತದೆ. ಆದರೂ ಆಯಾ ಹಾಡುಗಳಲ್ಲಿ ಮಿಂಚಿನಂತೆ ಭಾವಸ್ಫುಟತೆಗೂ, ಘಟನೆ, ಸನ್ನಿವೇಶಕ್ಕೂ ಪೋಷಕವಾಗಬಲ್ಲ ಹಲವಾರು ಪದ್ಯ ಖಂಡಗಳು ಭಾವಲಾಲಿತ್ಯ - ಅರ್ಥಧ್ವನಿಗಳಿಗೂ, ವೀರರಸಕ್ಕೊಪ್ಪುವ ಗಾಂಭೀರ್ಯ ಭಾಷೆಗೂ ನಿದರ್ಶನವಾಗಿದ್ದು, ನರಗುಂದದ ಐತಿಹಾಸಿಕ ಹಾಡುಗಳ ಶ್ರೀಮಂತಿಕೆಯನ್ನು ಹೆಚ್ಚಿಸಿವೆ. ಆ ಮೂಲಕ ಐತಿಹಾಸಿಕವಾದ ವಾಸ್ತವಿಕ ಸತ್ಯಸಂಗತಿಗಳನ್ನೂ ಮೇಳವಿಸಿಕೊಂಡಿವೆ ಮತ್ತು ಮೈಗೂಡಿಸಿಕೊಂಡಿವೆ. ಅಂತೆಯೇ ಆಯಾ ಸನ್ನಿವೇಶಗಳಿಗೆ ತಕ್ಕಂತೆ, ವೈಶಿಷ್ಟಪೂರ್ಣವಾಗಿ ಉಕ್ಕಿ ಬಂದಿರುವ ಜನಪದ ಹಾಡುಗಳ ಕೆಲವೊಂದು ರಸಘಟ್ಟಗಳನ್ನು ಇಲ್ಲಿ ಸಮಾಲೋಚಿಸುವುದು ಅಗತ್ಯವೆಂದು ಭಾವಿಸಲಾಗಿದೆ.

"ನರಗುಂದವೆಂಬೂದು ಅರಗಿಣಿಪಟ್ಟಣ
ಕೆರೆಕಡಿಸಿ ನೀರ ಕುಡಿಲ್ಲಿಲ್ಲ। ಬಾಬಣ್ಣ
ತಿರುಗಿ ನರಗುಂದ ಹೊಗಲಿಲ್ಲ"

ನರಗುಂದದ ಸಾಂಸ್ಕೃತಿಕ ಸಂಪತ್ತನ್ನು, ಬಾಬಾಸಾಹೇಬನ ಚಿಂತಾಜನಕ ಸ್ಥಿತಿಯನ್ನು ಚಿತ್ರಿಸುವ ಈ ಹಾಡು-'ಅರಗಿಣಿ'

ಅಂದರೆ ಪುರಾಣ. ವೇದಾಗಮ ಬಲ್ಲ ಪಂಡಿತರನ್ನು, ಸಂಗೀತ ಗಾರರನ್ನು ಹೊಂದಿತ್ತು ಎಂಬುದನ್ನೂ ಧ್ವನಿಸುವಂತಿದೆ. ಗಿಣಿಗಳು ವಾಸಿಸುವ ಪಟ್ಟಣವಂತೂ ಸರಿಯೆ.

ಬಾಬಾಸಾಹೇಬನು ದೊರೆತನ ಸ್ವೀಕರಿಸುವ ಕಾಲಕ್ಕೆ ನರಗುಂದದ ಆರ್ಥಿಕ ಸ್ಥಿತಿ ಅಷ್ಟು ಚೆನ್ನಾಗಿರಲಿಲ್ಲ. ಮತ್ತು ಪ್ರಜೆಗಳಿಗೆ ಅಂಥ ಅನುಕೂಲಗಳೂ ಇದ್ದಂತೆ ತೋರುವುದಿಲ್ಲ. ಅಂತೆಯೇ ಬಾಬಾಸಾಹೇಬನು ಬಿದ್ದ ಕೋಟೆ ಹಾಗೂ ಒಡೆದ ಕೆರೆಯನ್ನು ಕಟ್ಟಿಸಿದ್ದು ಮತ್ತು ಬಿದ್ದ ಅಗಸಿಯನ್ನು ಕಟ್ಟಿಸಿದ್ದು ಜನಪದ ಹಾಡುಗಳಲ್ಲಿ ಉಕ್ತವಾಗಿದೆ. ಅದಲ್ಲದೆ ನರಗುಂದದ ಯುದ್ಧದಲ್ಲಿ ಬಾಬಾಸಾಹೇಬನಿಗಾದ ಮನಸ್ಸಿನ ಬೇಗುದಿಗಳನ್ನೂ ಅವು ಅರ್ಥವತ್ತಾಗಿ ಬಿಂಬಿಸಿವೆ.

"ಕ್ವಾಟಿ ಬಿದ್ದಾವಂತ ಕ್ವಾಟೀಯ ಕಟ್ಟಿಸಿದ
ದಾಟಿ ಬಂದಾವ ಬಿಳಿ ಆನಿ । ಬಾಬಾಸಾಬ
ಈ ಕ್ವಾಟಿ ನನಗ ಎರವಂದ ।"

"ಅಗಸಿ ಬಿದ್ದಾವಂತ ಅಗಸೀಯ ಕಟ್ಟಿಸಿದ
ಸರಸಿ ಬಂದಾವ ಬಿಳಿಗುದರಿ । ಬಾಬಾಸಾಬ
ಈ ಅಗಸಿ ನನಗ ಎರವಂದ ।"

ನರಗುಂದದ ಪತನಕ್ಕೆ ನೊಂದ ಜಾನಪದ ಮನಸ್ಸು "ಬ್ರಾಹ್ಮರ ಧರ್ಮಾ ಸರಿಯಿತೋ ಇಲ್ಲಿಗೆ, ಮುಳಗಿತವರ ಅರಸುಕಿ" ಎಂದು ಕೊರಗಿದೆ.

"ಬಂಗಾರದ ಹೊಗಿ ಹಾಯುವಂಥ
ಸಿಂಗಾರ ನಾಡು ನರಗುಂದ
ಹ್ಯಾಂಗಾರ ಮಾಡಿ ನುಂಗೋಣಂದ್ರೋ ಇಂಗ್ರಜರು"

ಎಂದೊಬ್ಬ ಹಾಡುಗಾರ ತನ್ನ ಆಚ್ಚರಿ ಹಾಗೂ ಅಸಮಾಧಾನ ವನ್ನು ವ್ಯಕ್ತಪಡಿಸಿದ್ದಾನೆ ಅಷ್ಟೇ ಅಲ್ಲ;

"ಕರ್ನಾಟಕ ಪ್ರಾಂತದೊಳಗ ಸಿರಿನಾಡು ನರಗುಂದ
ಕುಡಕಬ್ಬಿಣ ಆಗಿತ್ತೊ ಬಂಗಾರಾ।
ಧಾನ್ಯಧನಗಳಿಂದ ಸಮುರುದ್ಧಿ ಸಂಪೂರ್ಣಾ।
ಚಿಂತಿ ಅಂಬೂದು ಕನಸಿನಾಗೂ ಇಲ್ಲ ಚೂರಾ
ಧರಮರಾಜನಂಥಾ ಭೂಪ ದರಪ ಅಂಬುದಿಲ್ಲ ಗೊತ್ತಾ.
ಪ್ರಜಾ ಅಂದ್ರ ಮಕ್ಕಳಂತೆ ತಿಳಿಯುವರಾ
ರಾಜ್ಯವಾಳುತ್ತಿದ್ದ ಬಾಬಾಸಾಯ್ಬ ಧೀರಾ-ನ್ಯಾಯ
ನಿಷ್ಠೂರಾ"

ಎಂದು ಬಾಬಾಸಾಹೇಬನ ವ್ಯಕ್ತಿತ್ವ ಹಾಗೂ ನರಗುಂದದ ಹಿರಿಮೆಯನ್ನು ಹೇಳುತ್ತ, ಬಾಬಾಸಾಹೇಬನ ಅನ್ಯೋನ್ಯ ದಾಂಪತ್ಯ ಮತ್ತು ಸರಸ ಸಜ್ಜನಿಕೆಗಳನ್ನೂ ಮುಕ್ತಮನಸ್ಸಿನಿಂದ ಹೀಗೆ ನೆನೆದಿದ್ದಾನೆ.

"ರತ್ನಜ್ಯೋತಿ ಇದ್ದಾಳೋ ಪಾರ್ವತೀ
ಬಾಬಾಸಾಯ್ಬನ ಸತೀ।
ನೀತಿಗಾಧಾರಾ-ಕೆರಳಿದರ ಕಾಳಿಯವತಾರಾ।

ರಾಜಮಾತಾನೊಡಗೊಂಡ ರಾಜಾರಾಣಿ ಕೂಡಿಕೊಂಡ
ಧರ್ಮದಿಂದ ರಾಜ್ಯವ ನಡೆಸುವರಾ.
ಗಂಡುಗಲಿ ಬಾಬಾಸಾಯ್ಬ ಬಂಡು ಮಾಡಿಬಿಟ್ಟಾನ
ರುಂಡ ಮಾಲಾಧಾರಿ ಶಿವನ ಅವತಾರಾ।"

ಇಂಥ ಹಾಲುಹಣ್ಣಿನಂಥ ಸಂಸಾರ ಹೊಂದಿದ ದೊರೆ ರುಂಡ ಮಾಲಾಧಾರಿ ಶಿವನ ಅವತಾರವೆಂದೇ ಹೇಳಿದ ಹಾಡುಗಾರ ತಟ್ಟನೇ

"ಎಷ್ಟು ಐಶ್ವರ್ಯವಿದ್ರೂ ಏನು ಮಾಡೂದೈತಿ
ಅವರಿಗಿದ್ದಿಲ್ರಿ ಸಂತಾನ।
ದೇವರಿಲ್ಲದ ಗುಡಿ ನೀರಿರದ ಸರೋವರ
ಆದಾಂಗ ಅರಸರ ಜೀವಮಾನಾ"

ಎಂದು ಹೇಳುವಲ್ಲಿ, ಅರಸರ ಭವಿಷ್ಯವನ್ನೇ ಅನುಕಂಪೆಗೆ ಒಳಗು ಮಾಡಿಕೊಂಡದ್ದು ಜಾನಪದ ಹಾಡುಗಾರನ ಅನುಭವ ಹಾಗೂ ಔನ್ನತ್ಯಕ್ಕೆ ಸಾಕ್ಷಿಯಾಗಿದೆ.

ಸಂತಾನವಿಲ್ಲದ ಈ ಮೂಲ ಕಾರಣವೇ ನರಗುಂದ ಬಂಡಾಯಕ್ಕೆ ಕಾರಣವಾಯ್ತು. "ದೊಡ್ಡವರಿಗೆ ದೊಡ್ಡಕ್ಕಿ ಪಡಿಕೊಟ್ಟು ನಡುವಿಗೆ ಒಡ್ಯಾಣ ಕೊಟ್ಟು; ಸಣ್ಣವರಿಗೆ ಸಣ್ಣಕ್ಕಿ ಪಡಿಕೊಟ್ಟು ನಡುವಿಗೆ ಸೆಲ್ಲೇವ ಕೊಟ್ಟು"—ಪ್ರಜಾವಾತ್ಸಲ್ಯ ಹಾಗೂ ಶೂರ ಪ್ರಜೆಗಳಿಗೆ ತಕ್ಕ ಸನ್ಮಾನ ಮಾಡುತ್ತಿದ್ದ ದೊರೆ—"ಗುಡಿಗುಂಡಾರಗಳನ್ನು ಮಹಲುಗಳನ್ನು ಸುಣ್ಣಬಣ್ಣ

ಗಳಿಂದ ಅಲಂಕರಿಸಿ, ಕಾಜಿನ ಕಂಬದ ನೆಲಗಚ್ಚಿನ ಅರಮನೆ ಯಲ್ಲಿ ಸಪನಿದ್ದೆಗೆಯ್ಯುವ"—ವೈಭವೋಪೇತ ವಿವರಗಳನ್ನು ಜನಪದ ಹಾಡುಗಳು ಚನ್ನಾಗಿ ಅಭಿವ್ಯಕ್ತಗೊಳಿಸಿವೆ.

ಇಂಥ ಬಂಗಾರದ ಹೊಗೆಯಾಡಿದ, ಸಂಪದ್ಭರಿತ ನರ ಗುಂದ, ಅಂಥ ಪಟ್ಟಣದ ದೊರೆಯ ಹಾಲಿನಂಥ ಸಂಸಾರಕ್ಕೆ ಹುಳಿ ಹಿಂಡಿದಂತೆ ಕೇವಲ ಮೂರು, ನಾಲ್ಕು ದಿವಸಗಳ ಅಲ್ಪಕಾಲದಲ್ಲಿಯೇ ನಡೆದ ಬಂಡಾಯ ಇಡೀ ಸಂಸ್ಥಾನವೇ ಬಿಳಿಯರ ಕೈಸೇರಿದ ಕೌತುಕದ ಸಂಗತಿ—ಜನಸಾಮಾನ್ಯರಿಗೆ ಗೊತ್ತಿಲ್ಲವಂತೆಯೇ ನಡೆದು ಹೋದ ದುರಂತದ ಹಾಗೂ ಘೋರ ಪರಿಣಾಮದ ವಿಷಯವನ್ನು ಜಾನಪದರು ಹೃದಯ ಸ್ಪರ್ಶಿಯಾಗಿ ತೋಡಿಕೊಂಡಿರುವುದು ಅರ್ಥಪೂರ್ಣವಾಗಿದೆ.

"ಹಾಲ್ಹಾಕು ಹೊತ್ತೀಗೆ ಹಾಳಾಯ್ತೋ ನರಗುಂದ
ಹಾಲ ಗಡಿಗೆಯವರು ತಲಿಮ್ಯಾಲೆ। ಬಾಲೇರು
ಹಾದ್ಯಾದಿಗೆ ಮೊಸರ ಕಡೆದಾರೋ।

ಹಾಲು ಕಾಸೊತ್ತಿಗೆ ಹಾಳಾತ ನರಗುಂದ
ಹಾವಳಿ ಬಂದಿದ್ದ ಅರಿಯರ। ನರಗುಂದ
ಹರದ್ಯಾರವರ ಕೈಸೆರಿಯ।

ತೊಟ್ಟಿಲ ತೂಗಾತಿದ್ದೆ ಬಟ್ಟಾಲ ಬೆಳಗಾತಿದ್ದೆ
ಪುತ್ರವಗೆ ನೀರ ಬೆರಸಿದ್ದೆ। ನರಗುಂದ
ನೆಚ್ಚಿಕಿ ಇಲ್ಲದೆ ಲೂಟಾಯ್ತು।

ಹಣ್ಣು ಮೆಣಸಿನಕಾಯಿ ಎಣ್ಣ್ಯಾಗ ಕರದಾಂಗ
ಅನ್ಯಾಯ್ದ ಊರು ಧಾರವಾಡ। ನರಗುಂದದ
ಹೆಣ್ಣು ಮಕ್ಕಳ ಗೋಳು ತಟ್ಲವ್ವಾ।"

ಈ ಮೇಲಿನ ಹಾಡುಗಳಲ್ಲಿ ಬಂದಿರುವ ನರಗುಂದದ ದಾರುಣ ಸ್ಥಿತಿ–ವಾಸ್ತವತೆಗೆ ಸಮೀಪವಾಗಿವೆ. 'ಹಣ್ಣು ಮೆಣಸಿನಕಾಯಿ ಎಣ್ಣ್ಯಾಗ ಕರದಾಂಗ'—ಎಂಬ ಉಕ್ತಿ ಪ್ರಾಸದ ಸೊಗಸಿನೊಂದಿಗೆ ಬಂಡಾಯದ ಕಾವನ್ನೂ, ಕ್ರೋಧವನ್ನೂ ಆ ಮೂಲಕ ಚಿಮ್ಮಿದ ಯೋಧರ ರಕ್ತದ ಕೆಂಪನ್ನೂ ಏಕಕಾಲಕ್ಕೆ ಧ್ವನಿಸಿರುವುದು ಗಮನಾರ್ಹ ಅಂಶವಾಗಿದೆ. ಆ ತ್ರಿಪದಿಯ ಎರಡನೆಯ ಪಾದದಿಂದ ಸಾಗುವ ಸಂಗತಿ, ಜಾನಪದ ಹೆಂಗಳೆಯರ ಮುಗ್ಧ ಮನಸ್ಸಿಗೆ ಪ್ರತೀಕವಾಗಿದೆ. ಕಾರಣ ಜನಸಾಮಾನ್ಯರಿಗೆ ಐತಿಹಾಸಿಕ ಸತ್ಯಸಂಗತಿಗಳ ತಿಳುವಳಿಕೆ ಕಡಿಮೆ. ತಾವು ಕಣ್ಣಾರೆ ಕಂಡದ್ದನ್ನು ಅನುಭವೈಕ್ಯ ಮಾಡಿಕೊಳ್ಳುವ ಉದಾರ ಹಾಗೂ ಸರಳ ಮನೋಭಾವ ಅವರದು. ಅಂತೆಯೇ–ಧಾರವಾಡದಿಂದ ಹೊರಟು ಬಂದ ಆಂಗ್ಲ ಅಧಿಕಾರಿಗಳೇ ನರಗುಂದದ ಎಲ್ಲ ಅನಾಹುತಕ್ಕೆ ಕಾರಣರಾದವರು ಎಂಬುದನ್ನು ಅವರು ಬಲ್ಲವರಾಗಿದ್ದಾರೆ. ಆದರೆ ಧಾರವಾಡದಿಂದ ಬಂದವರು ಹೊರಗಿನಿಂದ ಬಂದ ಆಂಗ್ಲರೇ ಹೊರತು, ಖುದ್ದ ಧಾರವಾಡದವರಲ್ಲ–ಎಂಬುದು ಅವರ ಗಮನಕ್ಕಿಲ್ಲ–ಆದ್ದರಿಂದಲೇ 'ಅನ್ಯಾಯ್ದ ಊರು ಧಾರವಾಡ' ಎಂದು ನೊಂದು, ಆ ಊರಿನವರಿಗೆ ನರಗುಂದದ ಹೆಣ್ಣುಮಕ್ಕಳ ಗೋಳು ತಟ್ಟಲೆಂದು ಶಪಿಸಿರುವುದು ಮನನೀಯವಾಗಿದೆ ಮತ್ತು ಸಹಜವೂ ಆಗಿದೆ.

ಬಾಬಾಸಾಹೇಬನು ತನ್ನ 'ಮಡದಿ ಮಕ್ಕಳ ಬಿಟ್ಟು' 'ಹಡೆದ ತಾಯಿಯ ಬಿಟ್ಟ'–ಕಡೆಗೆ 'ತನ್ನ ನಾಡಿನ ಆಶೆಯನ್ನೇ ಬಿಟ್ಟು' ಹೊರಟದ್ದನ್ನು ಹಾಡುಗಳು ಹೃದಯತುಂಬಿ ಬಣ್ಣಿಸಿವೆ. ಕೊನೆಗೆ 'ಕೇಡೀಗೆ ಬಿಟ್ಟ ನರಗುಂದ' ಎಂಬ ಐತಿಹಾಸಿಕ ಸತ್ಯವನ್ನು ತಿಳಿಸುತ್ತಾ—

"ಹಾರೂರು ಹಾವಾಗಿ ಕೋರ್‍ಯಾರೋ ಒಳಸಂಚು
ಗಾರಗಾರಾತೋ ನರಗುಂದ। ಬಾಬಾಸಾಬ
ಕಾರ ಮಳಿಯಾಗ ಮನಿಬಿಟ್ಟ।

ಬಾಪು ಪಂತರ ಸಂಚು ಘಾತನರಗುಂದಾತೋ
ಹೋತೋ ಹಾಳಾಗಿ ನಿಪ್ಪತಗಿ। ನರಗುಂದ
ಖ್ಯಾತಿ ಜನದಾಗ ಕಡೆತನಕ।

ಎಂದು ನರಗುಂದದ ಪತನಕ್ಕೆ ಕಾರಣರಾದ ಹಿತಶತ್ರುಗಳ ಜಾತಿ, ಹೆಸರು ಸಹಿತವಾಗಿ ಖಂಡಿಸಿರುವ ದಾರ್ಷ್ಟ್ಯ ಮೆಚ್ಚು ವಂಥದು. 'ಬಾಡುಗಳ್ಳರು ಹಾರೂರ ತಾ ನಂಬಿ, ಕಾಡಿಗೀಡಾದ ಬಾಬಣ್ಣ' ಎಂದು ತನ್ನ ಕಳವಳಕ್ಕೆ ಸಾಂತ್ವನ ಹೇಳಿಕೊಂಡು, ಸತ್ಯವನ್ನು ಜಗಜ್ಜಾಹೀರುಗೊಳಿಸುವ ನಿಷ್ಠುರತೆಯನ್ನೂ ಅಲ್ಲಿ ಕಾಣುತ್ತೇವೆ.

ನರಗುಂದವನ್ನು ಕಳೆದುಕೊಂಡು ಕಾಡುಪಾಲಾದ ಬಾಬಾಸಾಹೇಬನ ದುಸ್ಥಿತಿಯ ಚಿತ್ರಣವು, ಜಾನಪದ ಕಲಾಕಾರರ ಅದ್ಭುತ ಪ್ರತಿಭೆಗೂ, ಗ್ರಹಣಶಕ್ತಿಗೂ, ಕಲ್ಪನಾಶಕ್ತಿಗೂ. ಹಿಡಿದ ಕನ್ನಡಿಯಾಗಿದೆ.

"ಮಾಳಗಿ ಮ್ಯಾಗಿನ ಹುಲ್ಲಗಾಳಿಗ್ಹಾರಿದ್ಹಾಂಗ
ಗಾಲಮೇಲಾತೋ ನರಗುಂದ । ಬಾಬಾಸಾಬ
ಗಾಳೀಗೆ ಬಾಯ ಬಿಡತಾನೋ ।

ಇಲ್ಲಿ ಉಕ್ತವಾದ 'ಮಾಳಗಿ ಮ್ಯಾಗಿನ ಹುಲ್ಲ ಗಾಳಿಗ್ಹಾರಿದ್ಹಾಂಗ' ಎಂಬ ಉಪಮಾನವು ಪರಿಭಾವಿಸಿದಷ್ಟೂ ಅರ್ಥವಂತಿಕೆಯನ್ನು ಹೊಂದುವ ಸಾಮರ್ಥ್ಯ ಪಡೆದಿರುವುದನ್ನು ಗಮನಿಸಬೇಕು. ಅದಲ್ಲದೆ—

"ಗಚ್ಚಿನ ಕಟ್ಟೆಂತ ಮೆಚ್ಚಿ ಕೂಂದ್ರಲಿಲ್ಲ
ಉಕ್ಕೀನ ಗುಂಡ ಎಸದಾವ । ಬಾಬಾಸಾಬ
ಹಕ್ಯಾಗಿ ಬಾಯ ಬಿಡತಾನ ।

ಎಂಬ ತ್ರಿಪದಿಯ 'ಹಕ್ಯಾಗಿ ಬಾಯ ಬಿಡುವ' ರೂಪಕವೂ ಅಷ್ಟೇ ಧ್ವನಿಪೂರ್ಣವಾಗಿರುವುದನ್ನು ಕಾಣುತ್ತೇವೆ.

ಆಂಗ್ಲ ಅಧಿಕಾರಿಯಾದ ಮ್ಯಾಸಸನ್ ಸಾಹೇಬನನ್ನು ಕೊಂದು, ಅವನ ರುಂಡವನ್ನು ನರಗುಂದದ ಅಗಸೆ ಬಾಗಿಲಿಗೆ† ಕಟ್ಟಿದ (ಸನ್ನಿವೇಶದ) ನೈಜ ಚಿತ್ರಣ ಕೆಲವೊಂದು ಲಾವಣಿ ಹಾಡಿನಲ್ಲಿ ವೀರವತ್ತಾಗಿ ಬಂದಿದ್ದು, ಅದು ಕವಿಯ ಸೂಕ್ಷ್ಮ ಗ್ರಾಹಿತ್ವ ಸಾಮರ್ಥ್ಯವನ್ನು, ಚಿತ್ರಕಶಕ್ತಿಯನ್ನು ಎತ್ತಿತೋರಿಸುತ್ತದೆ. ಜನಪದ ಹಾಡುಗಾರರ ಅಭಿವ್ಯಕ್ತಿಯ ವೈವಿಧ್ಯವನ್ನು ಅವುಗಳಲ್ಲಿ ಕಾಣಬಹುದು.

"ಭಂಟರೆಲ್ಲಾ ಕೂಡಿಕೊಂಡು ಹೊಂಟುಬಂದರಾಗಳೆ
ತುಡುಗ ಇಂಗ್ಲೀಷರನ್ನ ಹುಡುಕುತಾ
ಇದರೀಗೆ ಬಂದವರನ್ನ ಚದುರಿಸಿ ನಡೀತಿದ್ರು
ಒದ್ದು ಕೊಲ್ಲತಿದ್ರು ಹಲ್ಲ ಕಡಿಯುತಾ

****

ಗದ್ದಲದಾಗ ತಾ ಎದ್ದು ಓಡಿ ಹೋಗಿ ಮ್ಯಾನಸನ್ನ
ಅಡಗಿದಾ ಗಡಗಡಾ ನಡಗುತ
ಮಾರುತಿ ಗುಡಿಯೊಳಗ ಅಡಗಿಕೊಂಡು ಗುಡಿ
ಜಂತೀ ಓಡದ ಬಿದ್ದಾನೊ ಜೋತಾ
ವೀರ ಅಭಿಮನ್ಯು ರಣದಾಗ ಹೊಕ್ಕಾಂಗ
ವಿಷ್ಣು ಹೊಕ್ಕನಪ್ಪಾ ಹುಡುಕುತಾ
ತೊಗಲಬಾವಲಿ ಹಾಂಗ ಜೋತಾಡೋ ಹೇಡಿನ್ನ
ಜಗ್ಗಿ ಕೆಡವಿದ ಹಲ್ಲ ಕಡಿಯುತಾ।

****

ಮ್ಯಾನಸನ್ನ ಕಾಲಿಗೆ ಬಿದ್ದ ಕ್ಷಮಾ ಬೇಡತಿದ್ದ
ಮಾಡಿ ನಮಸ್ಕಾರ। ಜೀವದಾನ ಮಾಡಿದರ ಘೋರಾ
ಹೇಡಿ ಅಂದ ವಿಷ್ಣು ನಾಕ ಒದ್ದ ಜುಟ್ಟಾ ಹಿಡಿದಿದ್ದ
ರುದ್ರನವತಾರ ರುಂಡಾ ಹಾರಿಸಿದಾನು ಗಂಭೀರಾ।
ಪ್ರಾಣದಾನ ಬೇಡಿದ್ದಕ್ಕ ಮಾನ ಕೊಡಬೇಕೆಂದ ದೊರಿ
ವಿಷ್ಣೂಗ ಬರಲಿಲ್ಲ ಸರಿ ಒಂದ ಚೂರಾ।

****

ಆದರೇನು ಸುತ್ತಹುಲಿ ಹತ್ತು-ನಡುಕ
ಒಂದು ಕುರಿಯು ಸಿಕ್ಕುಬಿತ್ತು
ಗುಂಡ ಹಾರಿಸತಾನ ಸುತ್ತಮುತ್ತು ಮ್ಯಾನ
ಸನ್ನ ಕೂಗತಾನ ನಿಂತು

ಆಗ ಬಾಬಾಸಾಯ್ಬ ಹೇಳ್ತಾನ ಮತ್ತು–ನುಚ್ಚು
ಹರಿಮುರಿಯಾಗಲಿ ಈ ಹೋತು।
ಬಾಬಾಸಾಹೇಬನ ನುಡಿ ಗವಿಗೆ ಬಿತ್ತು
ಮ್ಯಾನಸನ್ನನ ಕೆಲಸ ಮುಗಿದು ಹೋತು।

ವಿಷ್ಣು ಕುಲಕರಣಿ ಎಂಬ ತರುಣವೀರ
ಕದಾ ಒದ್ದಾನು ಧಡಾಧಡಾ–ಮುರಿದು
ಹೊಕ್ಕು ಒಳಗೆ ಹೊಡೆದನು ಸೆಡ್ಡಾ–ಕಳ್ಳ
ಅಡಗಿ ಕುಂತೀ ಯುದ್ಧಕ ಬಾರೋ ಗಡಾ।
ಮ್ಯಾನಸನ್ನನ ಗತಿ ಮೊದಲs ಮುಗಿದು ಹೋಗಿತ್ತೋ
ಮೂಲ್ಯಾಗ ಕುಂತು ನಡಗತಿದ್ದಾ ಮೂಢಾ–ವಿಷ್ಣು
ಎಳದು ತಂದು ಮ್ಯಾನಸನ್ನಂದು ಕೊಯ್ದ ರುಂಡಾ।

ಹೀಗೆ ಮ್ಯಾನಸನ್ನನ ಕೊಲೆಯ ಪ್ರಸಂಗವನ್ನು ಹಲವಾರು ವಿಧದಲ್ಲಿ ಹಾಡುಗಾರರು ಚಿತ್ರಿಸಿದ್ದಾರೆ. ಒಂದು ಹಾಡಿನಲ್ಲಿ 'ಪ್ರಾಣದಾನ' ಕೊಡಬೇಕೆಂದು ಹೇಳುವ ಬಾಬಾಸಾಹೇಬನ ಮುತ್ಸದ್ಧಿತನ ಪ್ರಕಟವಾಗಿದ್ದರೆ ಇನ್ನೊಂದು ಹಾಡಿನಲ್ಲಿ ಬಾಬಾ ಸಾಹೇಬನೇ 'ನುಚ್ಚು ಹರಿಮರಿಯಾಗಲಿ ಈ ಹೋತು' ಎಂದು ತನ್ನ ಸೈನಿಕರಿಗೆ ಆದೇಶಕೊಡುವಲ್ಲಿಯ ಸೇಡಿನ ಮನೋಭಾವ ಪ್ರಕಟವಾಗಿರುವುದನ್ನು ಗಮನಿಸಬಹುದು.

ಯುದ್ಧ ನಡೆದು ಬಿಳಿಯರ ಕೈಯೇ ಮೇಲಾದಾಗ ದಿಕ್ಕೇ ತೋಚದಂತಾದ ಬಾಬಾಸಾಹೇಬನ ಮಾನಸಿಕ ಸ್ಥಿತಿಯನ್ನು ಹಾಡುಗಳು ಚನ್ನಾಗಿ ವಿವರಿಸುತ್ತವೆ. ಕತ್ತಿ ಕಠಾರಿ

ಒಗೆದು ಪ್ರಾಣದಾನಕ್ಕಾಗಿ ಕೈಯೊಡ್ಡಿದ ಸೈನಿಕರು—ತಮ್ಮ ಹೆಂಡಿರು ಮಕ್ಕಳನ್ನು ನೆನೆಸಿ ಬಾಯಲ್ಲಿ ಹುಲ್ಲುಕಡ್ಡಿ ಕಚ್ಚಿ ನಿಂತ ಕರಾಳ ದೃಶ್ಯವೂ ಆತನ ಕಣ್ಣಿಗೆ ಬಿತ್ತು. ಮಾಡುವುದೇನು ? ಎಲ್ಲವೂ ಕೈಮೀರಿ ಹೋಗಿತ್ತು. ತನ್ನ ಕುಲದೇವರಾದ ವೆಂಕಟಸ್ವಾಮಿಯನ್ನು ನೆನೆಯುತ್ತ-ತನ್ನ ಕೋಟೆಯೊಳಕ್ಕೆ ಹೋಗಲು ಬಂದ. ಆದರೆ

"ಮುಚ್ಚಿದ್ದ ಕ್ವಾಟಿ ಬಾಗಲಾ ತೆಗೆಯಲಿಲ್ಲಾ
ಹುಚನಾಂಗ ದೊರಿ ಎತ್ತೋ ಹೋದನಲ್ಲಾ"

ಎಂದು ಜನ ತಳಮಳಿಸುವಂತಾಯ್ತೆಂದು-ಒಂದು ಹಾಡು ಹೇಳಿದರೆ, ಇನ್ನೊಂದು ಹಾಡಿನಲ್ಲಿ-ಬಾಬಾಸಾಹೇಬನು ತನ್ನ ತಾಯಿ ಹಾಗೂ ಹೆಂಡತಿಯರನ್ನು ಭೆಟ್ಟಿಯಾಗಿ—ಪ್ರಾಣ ಉಳಿಸಿಕೊಳ್ಳಲು ತಿಳಿಸಿ ಅಲ್ಲಿಂದ ಪಾರಾಗಿ ಹೋಗುವ ವಿಷಯ ಪ್ರಸ್ತಾಪವಾಗಿದೆ. ಇತ್ತ ಅರಮನೆಯಲ್ಲಿ ಕತ್ತಲೆಯೋ ಕತ್ತಲೆ.

"ಊರ, ಅರಸ ಹೋಗ್ಯಾನ ಯಾವಕಡೆ ಆದಗಪ್ಪಾ
ಮಂಗಳವಾರದಿನಾ ಊರಾಗ ಹಚ್ಚಲಿಲ್ಲ ದೀಪಾ
ಅತ್ತಿಸೊಸೀ ಲಕ್ಷ್ಮೀಬಾಯಿ ಬಾಬಾಸಾಯ್ಬನ ದುಸುಕ
ಶಿವತಂದು ಇಟ್ಟ ಯಾಳೇಕ ಮಾಡತಾರ ದುಕ್ಕಾ"

ಜಾನಪದ ಹಾಡುಗಾರನು-ಬಾಬಾಸಾಹೇಬನು ಹೋದನಂತರ ಅರಮನೆಯಲ್ಲಿ ಕಂಡ ದೃಶ್ಯವಿದು. ಹಲವಾರು ಹಾಡುಗಳಲ್ಲಿ ಬರುವ ಇದೇ ಸಂದರ್ಭದ ವೈವಿಧ್ಯತೆ ಮೆಚ್ಚುವಂಥದು.

ಊರಬಿಟ್ಟು ಹೊಳಿ ಇತ್ತೊ ಗಾವುದದಪ್ಪಾ
ರಾತರೀ ಹೋದರಪ್ಪಾ ಅಲ್ಲೇ ಬಂತು ಸಂಕಟಾ
ಅಹಲ್ಯಾ, ತಾರಾಮತಿ, ಮಂಡೋದರಿ, ಸೀತಾ, ದ್ರೌಪತಿ
ಹೊಳಿ ದಂಡೇಲಿ ಮಾಡ್ತಾರ ಚಿಂತಿ
ಜೀವ ಹೋಗಿ ದಡಾ ಉಳದೈತಿ
ಅತ್ತಿ ಸೊಸಿ ಇಬ್ಬರೂ ಜತಿ
ಹೊಳಿ ಹಾರಿ ಪಡೆದರೂ ಮೃತಿ ।

ತಗ್ಗು ತೆವರು ಕಲ್ಲುಮುಳ್ಳುಗಳನ್ನು ತುಳಿಯುತ್ತ, ಕಣ್ಣೀರು ಸುರಿಸುತ್ತ, ಬಾಬಾಸಾಹೇಬನನ್ನು ಹುಡುಕುತ್ತ, ಅತ್ತುಕರೆದು ಹಲುಬುವ ಹುಬೇ ಹುಬೇ ಚಿತ್ರವನ್ನು ಸುಂದರವಾಗಿ ಕೊಡುವ ಜನಪದ ಹಾಡುಗಳು ಕರುಣರಸವನ್ನು ಸೂಸುತ್ತವೆ.

"ಭಾರತದ ನಾರಿಯರು ವೈರೀ ಕೈಯಲ್ಲಿ ಸಿಗಬಾರದೆಂದು ಮಲಪ್ರಭಾನದಿಗೆ ಹೋಗಿ, ದಂಡೆಯಮೇಲೆ ತಮ್ಮ ವಸ್ತ್ರ ಒಡವೆಗಳನ್ನು ಬಿಚ್ಚಿಟ್ಟು ತಮ್ಮ ಕುಲದೈವ ವೆಂಕಟಸ್ವಾಮಿಯನ್ನು ನೆನೆದು ತೆಕ್ಕಿಮುಕ್ಕೀ ಬಿದ್ದುಕೊಂಡೇ ಹೊಳೆಗೆ ಧುಮುಕಿ—ನಾಡಿನ ಕಥಿಯೊಳಗ ತಮ್ಮ ಹೆಸರನ್ನು ಬರೆಸಿದರೆಂದು" ಒಬ್ಬ ಹಾಡುಗಾರ ಈ ಸನ್ನಿವೇಶವನ್ನು ಅಭಿಮಾನದಿಂದ ಸ್ಮರಿಸಿದ್ದಾನೆ.

ಅತ್ತಿಗೆ ಸೊಸ್ತ್ಯಾರವರು ಜತ್ತಗ ಹಿಡಕೊಂಡ
ಮುತ್ತಿನ ಮಾಲ ಇಳಿದಾರ । ಕೊಣ್ಣೂರ
ಒತ್ತಿನ ಹೊಳಿಯಾಗ ಹಾರ್‍ಯಾರ ।

ಎಂಬ ತ್ರಿಪದಿ ಈ ಸನ್ನಿವೇಶವನ್ನೇ ಅಚ್ಚುಕಟ್ಟಾಗಿ ಹೇಳುವ ರೀತಿ ಅರ್ಥಪೂರ್ಣವಾಗಿದೆ.

ನರಗುಂದದ ಬಂಡಾಯದ ಘೋರ ಪರಿಣಾಮದ ಕಡೆಗೇ ಗಮನಹರಿಸಿದ ಜನಪದ ಹಾಡುಗಳು ವೈವಿಧ್ಯಮಯವಾಗಿವೆ. ಜಾನಪದ ಸಮುದಾಯವೇ ಒಕ್ಕೊರಲಿನಿಂದ ನರಗುಂದದ ಪತನಕ್ಕಾಗಿ ತಲ್ಲಣಗೊಂಡ ಸ್ಥಿತಿಯೂ ವಾಸ್ತವಪೂರ್ಣವಾಗಿ ಉಕ್ತವಾಗಿದೆ. ಸಮಷ್ಟಿಯ ನಾಲಿಗೆಯಾಗಿ ಹೊರಹೊಮ್ಮಿದ ನಿರಕ್ಷರಿಗಳ ಈ ಹಾಡುಗಳಲ್ಲಿ ಸಂಸ್ಕಾರಯುಕ್ತ ಮನಸ್ಸಿನ ಒಳಪದರುಗಳನ್ನು ಗುರುತಿಸಬಹುದಾಗಿದೆ. ಜಾನಪದರು ಕಂಡ—ದಾರುಣ ಸ್ಥಿತಿ ಇದು.

"ಸಮುದರಾ ಬಂತೊ ಹೊರಚೆಲ್ಲಿ
ಬಡಮಂದಿ ಹ್ವಾದರೊ ತೇಲಿ
ಒಂದು ಲಡಾಯಿ ಆತು ಊರ ಬದೀಲಿ
ಹರಿದೀತು ನೆತ್ತರ ಕಾವಲಿ †
ಮುಂದಾಗುವಂಥಾದ್ದು ತೀಳಿಲಿಲ್ಲ ಆಟ
ತುಪ್ಪ ಹೋಳೀಗಿ ಆಗಿತ್ತು ಮಾಡಲಿಲ್ಲ ಊಟ"

ನರಗುಂದಕ ಹಾಕ್ಯಾರೊ ಹಲ್ಲಾ
ಮುರದಾರೋ ಅಗಸಿ ಬಾಗಲಾ
ಆಗಲಿಲ್ಲ ತಡಾ ಗಡ ತಗೊಂಡಾರೋ ಗಳಿಗ್ಯಾಗ
ಮುಗಿಬಿದ್ದು ಹೊಕ್ಕಾರೋ ಊರಾಗ ।
ಕುರಿಕೋಳಿ ಕಡಿದು ಕೆಟ್ಟ ಕೆಲಸಾ

ಮಾಡ್ಯಾರೊ ಹೊಲಸ ಹೊಲಸಾ ।
ಆಕಳ ಕೊಂದಕ್ಯಾರ ಹರವ್ಯಾರ ಗುಡಿತುಂಬ ಮಾಸಾ ।
ನರಗುಂದ ಇಂಗ್ರಜಾ ತೊಗೊಂಡ ಮಂಗಳವಾರ
ದಿವಸಾ ।"

ಹೀಗೆ ವಿವರಗಳನ್ನೆಲ್ಲ ಬಿಚ್ಚಿಕೊಳ್ಳುತ್ತ ಹೋಗುವ ಈ ಹಾಡು (ಹಾಳಾತ ನರಗುಂದ) ಅನೇಕ ರೀತಿಯಲ್ಲಾದ ತೊಂದರೆ, ಅಪಮಾನಗಳ ಸುರುಳಿಯನ್ನೇ ಬಿಚ್ಚುತ್ತಾ ಸಾಗುವುದು ಅಧ್ಯಯನ ಯೋಗ್ಯವಾಗಿದೆ. "ತುಂಬಿದ ಮನೆಗೇ ಸೋಜರು ಬಂದು ಗರತಿಯರನ್ನು ಕಾಡಿಸಿದ್ದು, ಬಾಳುಳ್ಳ ಮಂದಿ ಕೆರಿ-ಭಾವಿಗೆ ಸೋಬತಿಯಾದದ್ದು, ಬಡ ಜನಾ ಗುದ್ದ ಕಲ್ಲ ಎಡವಿ ಬಿದ್ದು ಸತ್ತು ಹೋದದ್ದು, ಅಡವ್ಯಾಗ ಕುಂತು ಕೂಸಿನ ನೆನಪಾಗಿ ಅಳುವ ತಾಯಿ ಸಂಕಟಪಟ್ಟದ್ದು, ಭಾಂಡೆ, ಉಂಗುರ ಉಡದಾರ, ರತ್ನ, ಶಿವದಾರಗಳನ್ನು ಬಿಡದೇ ಬಿಳಿಯರು ದೋಚಿದ್ದು, 'ಹಾರುವಾ ಅಂತಾನ ನಂದs ಹೋತು ಜನಿವಾರ" ಎಂದು ಕೊರಗಿದ್ದು; ಜೋಗವ್ವ ತನ್ನ ಚವ್ವರವೇ ಹೋತು ಎಂದು ಅತ್ತಿದ್ದು, ಬಂಗಾರದ ಮೂರ್ತಿ, ಕಳಸ ಎಲ್ಲ ಸಂಪತ್ತನ್ನೇ ನಿರ್ದಾಕ್ಷಿಣ್ಯವಾಗಿ ದೋಚಿದ್ದು ಇತ್ಯಾದಿ ಜ್ವಲಂತ ವಿವರಗಳನ್ನು ತುಂಬಿಕೊಂಡ ಈ ಹಾಡು ವಾಸ್ತವತೆಯ ಆವರಣದಲ್ಲಿಯೇ ಕೆಲವೊಂದು ಕಲ್ಪಿತ ಸಂಗತಿಗಳಿಂದ ಕೂಡಿದ್ದರೂ ಸತ್ಯಾಂಶದ ಕಡೆಗೇ ಬೆರಳು ತೋರುತ್ತಿರುವುದು ಮಹತ್ವದ್ದಾಗಿದೆ. ಇದೇ ವಿಷಯವನ್ನು ಬೇರೆ ಬೇರೆ ಹಾಡುಗಳಲ್ಲೂ ಗಮನಿಸಬಹುದು. ನರಗುಂದದ ಸಾರಸರ್ವಸ್ವವನ್ನೇ ಲೂಟಿ ಮಾಡಿದ ಬಿಳಿಯರು—"ಮೊಸರು ಬೆಣ್ಣೆ ತುಪ್ಪಾ

ಒಂದೂ ಬಿಡಲಿಲ್ಲವಂತೆ, ಗೋದಿ ಜೋಳಾ ಸಾಗಿಸಿದರಂತೆ, ತುಂಬಿದ ಪ್ಯಾಟಿಯ ಮುತ್ತು ರತ್ನ ಎಲ್ಲವನ್ನೂ ದೋಚಿದರಂತೆ, ಸಾಲದ್ದಕ್ಕೆ ತಿನ್ನುವ ಜೀನಸುಗಳನ್ನೂ ಚೆಲ್ಲಿ ಕೆಡಿಸಿದರಂತೆ, ಕೊಬ್ಬರಿ ಸಕ್ಕರೆ ತಿಂದರಂತೆ, ಜವಳಿ ಮಳಿಗೆಗಳನ್ನೇ ಖಾಲಿ ಮಾಡಿ ತಮಗೆ ಬ್ಯಾಡಾದ್ದನ್ನು ಹರಿದು ಹಾಕಿದರಂತೆ" ಎಂದು ಮುಂತಾದ ಸೂಕ್ಷ್ಮ ವಿವರಗಳನ್ನೆಲ್ಲವನ್ನೂ ಹಾಡುಗಳು ಹೆಕ್ಕಿಕೊಂಡಿವೆ. ಕೊನೆಗೆ—

"ಅಯ್ಯೋ ಎಂಥಾದ್ದು ನರಗುಂದ ಹಲ್ಲಾ
ದಾನವರಿಗೆ ದಯಾ ಮಯಾ ಇಲ್ಲಾ"

ಎಂದು ಸಂತಾಪದಲ್ಲಿಯೇ ಸಾಂತ್ವನಗೊಂಡ ಜಾನಪದ ಮನಸ್ಸು ಹಾಡಾಗಿ ಹರಿದಿದೆ. ಅದಲ್ಲದೆ ಬದುಕಿನ ಬಗೆಗೆ ಅವರಿಗಿರುವ ತತ್ವಜ್ಞಾನವೂ ಹಾಡಿನಲ್ಲಿ ಸೂಕ್ತವಾಗಿ ಹೊರಹೊಮ್ಮಿದೆ. ಕಾಲಜ್ಞಾನ ತಿಳಿದ ಅವರು ನರಗುಂದದ ಭವಿಷ್ಯದ ಬಗೆಗಿನ ಭಾವನೆಯನ್ನು ಸೂತ್ರಪ್ರಾಯವಾಗಿ ಹೇಳಿದುದು ಅರ್ಥಪೂರ್ಣವಾಗಿದೆ.

"ವೆಂಕೋಬಾನ ಮೂರ್ತಿ ಆಗೂದು ಭಿನ್ನಾ
ಗೋವಿಗೆ ಚೂರಿ ಹಾಕುವರಿನ್ನಾ।
ಹೀಂಗ ಸಾರಿದ ಕಾಲಜ್ಞಾನವನಾ ನಿಜ
ಮಾಡಿದರೋ ಇಂಗ್ರೇಜಿ ಜನಾ।

## ೫. ಉಪಸಂಹಾರ

"ನರಗುಂದ ಹಾಳಾತ ಪುಣ್ಣೇಕ ಸೂರ್ಯಾತ
ಸುತ್ತ ಹಳ್ಳಿಗೆ ಹೆಸರಾತ। ಕಲಕೇರಿ
ತಟ್ಟಿದ ಮನಿಗೆ ಕದವಾತ"

ಎಂದು ಹಾಡಿಕೊಂಡಿರುವ ಜಾನಪದರು ನರಗುಂದದ ಪುಣ್ಯವೇ ಹೋದಂತೆ-ಬಾಬಾಸಾಹೇಬನ ಅಂತ್ಯದ ಬಗ್ಗೆ ತಮ್ಮ ಅಪಾರ ಗೌರವ ಮೆಚ್ಚುಕೆಗಳನ್ನು ತೋರಿದ್ದಾರೆ. ನರಗುಂದವು ಹಾಳಾಗಿ ಲೂಟಿಯಾದ ಸಂದರ್ಭದಲ್ಲಿ–ಅರಮನೆಯ ತೊಲೆ ಕಂಬಗಳೆಲ್ಲವೂ ಕಳುವಾಗಿ ಕಲಕೇರಿಗೆ ಹೋಗಿರಬಹುದೇ ? ಎಂಬ ಸಂಶಯ, ಮೇಲಿನ ತ್ರಿಪದಿಯಿಂದ ವಿದಿತವಾಗುತ್ತದೆ. ಅದಲ್ಲದೆ 'ನರಗುಂದ ಕಾಳಪನ ಮರಿಗುದರಿ ಸಾಯಲಿ, ಚೆದು ರಂಗ ಮಾಲ ಮುರಿಯಲಿ' ಎಂಬುದೂ ಕೂಡಾ ವಿಚಾರಾರ್ಹ ಅಂಶವಾಗಿದೆ. ಇವೆಲ್ಲವೂ ನರಗುಂದದ ದೊರೆ ಬಾಬಾಸಾಹೇಬನ ಬಂಡಾಯಕ್ಕೇ ಆಕರವಾಗುವ ಅಂಶಗಳೆಂಬುದು ನಿಸ್ಸಂಶಯ. ನರಗುಂದವು ನಂಬಿಗಿಯ ಮೇಲೆಯೇ ಹಾಳಾಗಿ ಹೋದ ದ್ದನ್ನಲ್ಲದೇ-ಯಾರು ಯಾರು ಕಾರಣರೆಂಬುದನ್ನೂ ಎಣಿಎಣಿಸಿ ಹಾಡಿನ ತುಂಬ ಸಿಟ್ಟನ್ನೇ ಹರವಿದ್ದಾರೆ-ಜಾನಪದರು.

"ನಮ್ಮವರೆ ಸಂಸ್ಥಾನ ಮುಣುಗಿಸಿ ಬಿಟ್ಟಾರ
ವೈರಿಯ ಕೂಡುತೆ ಹಣಕಾಗಿ । ಪಣತೊಟ್ಟ
ನೀತಿಗೆ ಅರದಾಳ ಹಚ್ಚ್ಯಾರ ।"

ಎಂದು-ಝಾಂಸಿರಾಣಿ, ಕಿತ್ತೂರ ಚೆನ್ನಮ್ಮ ಮುಂತಾದವರ ಉದಾಹರಣೆಗಳೊಂದಿಗೆ ನರಗುಂದದ ಪತನಕ್ಕೆ ಕಾರಣವಾದ ಬೀಜರೂಪದ ಸತ್ಯವೇ ಈ ಮೇಲಿನ ತ್ರಿಪದಿಯಲ್ಲಿ ಅಡಗಿದೆ. ಅದಲ್ಲದೆ ಪ್ರಾಚೀನಕಾಲದಿಂದಲೂ ವೈಭವವನ್ನೂ ಮೆರೆದ ನರಗುಂದ ಪಟ್ಟಣದ-ಐತಿಹಾಸಿಕ ಬಂಡಾಯವು ಬಾಬಾ ಸಾಹೇಬನಂಥ ಸ್ವಾತಂತ್ರ್ಯಪ್ರೇಮಿಯಿಂದ ಪ್ರಜ್ವಲಿಸಿ ಕೆಂಡ ವಾಗಿ, ಹಿತಶತ್ರುಗಳ ಒಳಸಂಚಿನಿಂದ ಬೂದಿಯಾಗಿ ಹೋದ

ದಾರುಣ ಸನ್ನಿವೇಶವನ್ನು, ಶಿಷ್ಯರೂ, ಜಾನಪದರೂ ಕೂಡಿಯೇ ಕಾವ್ಯವಾಗಿರಿಸಿದ್ದನ್ನು ಯಾರಾದರೂ ಗಮನಿಸುವ ಅಂಶವಾಗಿದೆ. ನರಗುಂದದ ಸಂಪತ್ತನ್ನೆಲ್ಲವನ್ನೂ ದೋಚಿಕೊಂಡು ಹೋದ ನಂತರ ಆದ ನರಗುಂದದ ದಾರುಣ ಸ್ಥಿತಿ ಇಂದಿಗೂ ಉಳಿದು ಬಂದಿದೆಯೇನೋ ಎನ್ನುವಂತೆ-ನೀರಿಲ್ಲದ ನರಗುಂದವನ್ನು ಕುರಿತ ಹಾಡೊಂದು ನಮ್ಮ ಗಮನ ಸೆಳೆಯುತ್ತಿದೆ.

"ಹೆಸರೀಗೆ ನರಗುಂದ ಮೊಸರೀಗೆ ನೀರಿಲ್ಲ
ಕುಸುರದ ಸಿಂಬಿ ಬರಿಗೊಡ । ಇಟಗೊಂಡು
ಉಸುರಂತ ಬಾವಿ ಇಳಿದಾರೊ ।"

ಕೆರೆಕಟ್ಟೆ ಕಟ್ಟಿಸಿ ನರಗುಂದಕ್ಕೆ ನೀರಿನ ಬವಣೆಯನ್ನು ತಪ್ಪಿಸಿದ ಬಾಬಾಸಾಹೇಬನೇ ದೂರವಾದನಂತರ-ಆತ ಕಟ್ಟಿಸಿದ ಕೆರೆ ಬಾವಿಗಳೂ ಬತ್ತಿಹೋದವೇ ಎನ್ನುವ ಧ್ವನಿ ಈ ಹಾಡಿನಲ್ಲಿ ರುವುದು ಗಮನಾರ್ಹವಾಗಿದೆ.

## ೬. ಗ್ರಂಥಋಣ

೧. ಜಾನಪದ ನರಗುಂದ : (೧೯೭೩) ಸಂಪಾದಕರು- ಎ. ಎಸ್. ಹೂಗಾರ. ಬಾಬಾಸಾಹೇಬ ಗ್ರಂಥ ಪ್ರಕಾಶನ ನರಗುಂದ.

೨. ಕ್ರಾಂತಿವೀರ ಬಾಬಾಸಾಹೇಬ : (೧೯೭೧) ಸಂಪಾದಕರು- ಎ. ಎಸ್. ಹೂಗಾರ, ಬಾಬಾಸಾಹೇಬ ಗ್ರಂಥ ಪ್ರಕಾಶನ ನರಗುಂದ.

೩. ನರಗುಂದದ ಇತಿಹಾಸ : (೧೯೭೪) ಎಸ್. ಎಲ್. ಶಾಂತಕುಮಾರಿ, ೧೯೮, ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

---

* ಡಾ. ಪಿ. ಬಿ. ದೇಸಾಯಿ (ಪತ್ಯ ಪುಟ ಸಂಖ್ಯೆ. ೫)
ನರು = ಸುಗಂಧ. ಕುನ್ರು–ಕುನ್ನ–ಗುಂದ = ಎತ್ತರವಾದ ಸ್ಥಳ.

* ಶ್ರೀ ಎ. ಎಸ್. ಹೂಗಾರ ಸಂಪಾದಿಸಿದ, ಜಾನಪದ ನರಗುಂದ ಗ್ರಂಥದ 'ನರಗುಂದದ ಸ್ವಾತಂತ್ರ್ಯ ಸಮರ' ಲಾವಣಿಯನ್ನು ಪ್ರಧಾನವಾಗಿ ಆಧರಿಸಿದೆ. (ಪತ್ಯ ಪುಟ ಸಂಖ್ಯೆ. ೧೨)

† ಮ್ಯಾನಸನ್ನನ ರುಂಡಕಟ್ಟಿದ ಅಗಸೆ, ಇಂದಿಗೂ ನರಗುಂದದಲ್ಲಿ ಕೆಂಪಗಸೆ ಎಂದೇ ಹೆಸರಾಗಿರುವುದು ಗಮನಾರ್ಹ.
(ಪತ್ಯ ಪುಟ ಸಂಖ್ಯೆ. ೩೧)

## ಉಪನ್ಯಾಸ ಗ್ರಂಥಮಾಲೆಯ
## ಕೆಲವು ಪ್ರಕಟನೆಗಳು

---

೧. ಜನಪದ ತ್ರಿಪದಿಗಳಲ್ಲಿ ಜೀವನ ಮೌಲ್ಯ
—ಎಮ್. ಬಿ. ಹೂಗಾರ

೨. ಜನಪದ ಸಾಹಿತ್ಯದಲ್ಲಿ ನೀತಿ —ಎಮ್. ಎನ್. ವಾಲಿ

೩. ಜನಪದ ಸಾಹಿತ್ಯದಲ್ಲಿ ಮಾತೃವಾತ್ಸಲ್ಯ
—ಲೀಲಾವತಿ ಬಿ. ತೋರಣಗಟ್ಟಿ

೪. ಗರತಿಯ ಹಾಡುಗಳಲ್ಲಿ ಕೌಟುಂಬಿಕ ಜೀವನ ಚಿತ್ರಣ
—ದೇವೇಂದ್ರಕುಮಾರ ಹಕಾರಿ

೫. ಕನ್ನಡದಲ್ಲಿ ತ್ರಿಪದಿ ಸಾಹಿತ್ಯ —ಎಸ್. ಎಸ್. ಕೋತಿನ

೬. ಜಾನಪದ ವೀರ ಗೀತೆಗಳು —ಬಿ. ಬಿ. ಮಹೀಶವಾಡಿ

೭. ಜನಪದ ಕಥೆಗಳು —ಎಲ್. ಆರ್. ಹೆಗಡೆ

೮. ಜನಪದ ಕಾವ್ಯ —ಗಿರಡ್ಡಿ ಗೋವಿಂದರಾಜ

೯. ಜನಪದದಲ್ಲಿ ಮಕ್ಕಳ ಸಾಹಿತ್ಯ
—ಸಂಗಮೇಶ ಎಮ್. ಬಿರಾದಾರ

೧೦. ಹಬ್ಬಗಳ ಜಾನಪದ ಹಾಡುಗಳು —ಎಮ್. ಎನ್. ವಾಲಿ

---

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦ ೦೦೩.